# ಮೂಡ್ನಾಕೂಡು ಚಿನ್ನಸ್ವಾಮಿಯವರ ಕವನಗಳಲ್ಲಿ ದಲಿತ ಸಂವೇದನೆ

(ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಕನ್ನಡ ಎಂ.ಫಿಲ್ ಪದವಿಗಾಗಿ ಸಲ್ಲಿಸಿರುವ ಸಂಶೋಧನಾ ನಿಬಂಧ)


ಸಂಶೋಧನಾ ವಿದ್ಯಾರ್ಥಿ

ದಿವ್ಯ ಡಿ.ಎನ್

ರಿ.ನಂ : ೧೪೧೨೦೧೦೩೦೦೪೬

ಮಾರ್ಗದರ್ಶಕರು

ಡಾ.ಪಿ.ಚಿಟ್ಟೇಗೌಡ

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು





ಕರ್ನಾಟಕ ಸಂಘ (ರಿ) ಮಂಡ್ಯ

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕನ್ನಡದ ವಿಶ್ವವಿದ್ಯಾನಿಲಯ, ಹಂಪಿಯಿಂದ ಮಾನ್ಯತೆ ಪಡೆದಿದೆ.

೨೦೧೪-೨೦೧೫

# ಮೂಡ್ನಾಕೂಡು ಚಿನ್ನಸ್ವಾಮಿಯವರ ಕವನಗಳಲ್ಲಿ ದಲಿತ ಸಂವೇದನೆ

(ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಕನ್ನಡ ಎಂ.ಫಿಲ್ ಪದವಿಗಾಗಿ ಸಲ್ಲಿಸಿರುವ ಸಂಶೋಧನಾ ನಿಬಂಧ)


ಸಂಶೋಧನಾ ವಿದ್ಯಾರ್ಥಿ

**ದಿವ್ಯ ಡಿ.ಎನ್**

ರಿ.ನಂ : ೧೪೧೨೦೧೦೩೦೦೪೬





ಮಾರ್ಗದರ್ಶಕರು

**ಡಾ.ಪಿ.ಬೆಟ್ಟೇಗೌಡ**

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು





**ಕರ್ನಾಟಕ ಸಂಘ (ರಿ) ಮಂಡ್ಯ**

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕನ್ನಡದ ವಿಶ್ವವಿದ್ಯಾನಿಲಯ, ಹಂಪಿಯಿಂದ ಮಾನ್ಯತೆ ಪಡೆದಿದೆ.

೨೦೧೪-೨೦೧೫

# ಮಾರ್ಗದರ್ಶಕರ ದೃಢೀಕರಣ ಪತ್ರ

೨೦೧೪-೨೦೧೫ ನೇ ಸಾಲಿನಲ್ಲಿ ದಿವ್ಯ ಡಿ.ಎನ್. ಎಂ. ಎಂ.ಫಿಲ್ ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ "ಮೂಡ್ನಾಕೂಡು ಚಿನ್ನಸ್ವಾಮಿಯವರ ಕವಿತೆಗಳಲ್ಲಿ ದಲಿತ ಸಂವೇದನೆ" ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಇದನ್ನು ಇವರು ಈ ಮೊದಲು ಯಾವುದೇ ಪದವಿ, ಡಿಪ್ಲೋಮೊ ಅಧ್ಯಾಯನಕ್ಕಾಗಲೀ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : ೨೦/೦೮/೧೫

ಸ್ಥಳ : ಮೈಸೂರು.

ಮಾರ್ಗದರ್ಶಕರ ಸಹಿ

ಡಾ.ಪಿ.ಬೆಟ್ಟೇಗೌಡ

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘ ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೧೪-೨೦೧೫ನೇ ಸಾಲಿಗೆ ಕನ್ನಡ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಮೂಡ್ನಾಕೂಡು ಚಿನ್ನಸ್ವಾಮಿಯವರ ಕವಿತೆಗಳಲ್ಲಿ ದಲಿತ ಸಂವೇದನೆ"** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಡಾ.ಪಿ.ಬೆಟ್ಟೇಗೌಡರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ, ಈ ನಿಬಂಧದ ಯಾವುದೇ ಅಧ್ಯಯನವನ್ನಾಗಲೀ ಯಾವುದೇ ಪದವಿ, ಡಿಪ್ಲೋಮೊ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ (ಕನ್ನಡ) ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ : ೩೦/೦೮/೧೫

ಸ್ಥಳ : ಮಂಡ್ಯ

ಸಂಶೋಧನಾ ವಿದ್ಯಾರ್ಥಿ

ದಿವ್ಯ ಡಿ.ಎನ್

ರಿ.ನಂ. ೧೪೧೨೦೧೦೩೦೦೪೬

ಕನ್ನಡ ವಿಭಾಗ

ಕರ್ನಾಟಕ ಸಂಘ (ರಿ) ಮಂಡ್ಯ

ಎಂ.ಎಲ್.ಶ್ರೀಕಂಠೇಶಗೌಡ

ಸಂಶೋಧನಾ ಕೇಂದ್ರ

# ಪರಿವಿಡಿ

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ:

ಕನ್ನಡ ಸಾಹಿತ್ಯದಲ್ಲಿ ದಲಿತ ಕಾವ್ಯಗಳು ಒಂದು ದೊಡ್ಡ ಅಲೆಯನ್ನು ಎಬ್ಬಿಸಿವೆ. ಈ ನಿಟ್ಟಿನಲ್ಲಿ ಅಸ್ಪೃಶ್ಯತೆಯ ಬಗೆಗಿನ ನೋವನ್ನು ಕವಿತೆಯ ಮೂಲಕ ಬಿಚ್ಚಿಡಲು ಹಲವು ಕವಿಗಳು ಪ್ರಾರಂಭಿಸಿದರು. ಅವರುಗಳಲ್ಲಿ ಮೂಡ್ನಾಕೂಡು ಚಿನ್ನಸ್ವಾಮಿಯವರು ಒಬ್ಬರಾಗಿದ್ದಾರೆ. ಕನ್ನಡದ ಸಂದರ್ಭದಲ್ಲಿ ದಲಿತ ಕಾವ್ಯಗಳು ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದರೂ ಸಹಾ ಕವಿತೆಯ ವಸ್ತುವಿಗಾಗಿ ನೋವನ್ನೆ ಮುಖ್ಯವಾಗಿಟ್ಟುಕೊಳ್ಳುತ್ತೇವೆ. ಈ ಅಸ್ಪೃಶ್ಯತೆಯ ನೋವನ್ನು ಹೋಗಲಾಡಿಸಲು ಸೌಮ್ಯ ಮತ್ತು ಕ್ರಾಂತಿಯ ಅಲೆಯನ್ನು ಎಬ್ಬಿಸಲು ಪ್ರಾರಂಭಿಸಲಾಯಿತು. ಈ ಉದ್ದೇಶದಿಂದಾಗಿ ನಾನು ಮೂಡ್ನಾಕಾಡು ಚಿನ್ನಸ್ವಾಮಿಯವರ ದಲಿತ ಸಂವೇದನೆಯುಳ್ಳ ಕವಿತೆಗಳನ್ನು ಮಾತ್ರ ಆಯ್ದುಕೊಂಡು ಅಧ್ಯಯನ ಮಾಡಲು ಪ್ರಯತ್ನಿಸಿದ್ದೇವೆ.

**ಮೂಡ್ನಾಕೂಡು ಚಿನ್ನಸ್ವಾಮಿಯವರ ಕವನಗಳಲ್ಲಿ ದಲಿತ ಸಂವೇದನೆ** ಎಂಬ ಶೀರ್ಷಿಕೆಯಡಿಯಲ್ಲಿ ನಿಬಂಧ ರಚಿಸಲು ಪ್ರಯತ್ನಿಸಿದ್ದು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಡಿಯಲ್ಲಿ ಹಲವು ಉಪ ಶೀರ್ಷಿಕೆಯನ್ನಿಟ್ಟು ಅಧ್ಯಯನ ಮಾಡಲು ಹೊರಟಿದ್ದೇನೆ.

ನನ್ನ ಮೊದಲನೇ ಅಧ್ಯಾಯವು 'ದಲಿತ ಪರಿಕಲ್ಪನೆ' ಎಂಬ ಶೀರ್ಷಿಕೆಯನ್ನು ಹೊಂದಿದ್ದು ಈ ಅಧ್ಯಯನದಲ್ಲಿ ದಲಿತ ಎಂಬ ಪರಿಕಲ್ಪನೆಯ ಸುದೀರ್ಘ ಚರ್ಚೆಯನ್ನು ಮಾಡಲಾಗಿದೆ. ದಲಿತ ಎಂಬುದು ಪದವಾಗಿ, ಪ್ರಜ್ಞೆಯಾಗಿ, ಜನರಾಗಿ, ಸಾಹಿತ್ಯವಾಗಿ, ಕಾವ್ಯವಾಗಿ ಅದು ಪಡೆದುಕೊಂಡ ಹಾಗೂ ಪಡೆದುಕೊಳ್ಳುತ್ತಿರುವ ಸ್ಥಿತ್ಯಂತರಗಳ ಕುರಿತಾಗಿ ಹೇಳಲಾಗಿದೆ. ದಲಿತ ಎಂದರೆ ಯಾರು? ಎಂಬ ಪ್ರಶ್ನೆ ಸರಳವಾಗಿ ಕಂಡರು ಅದನ್ನು ಉತ್ತರಿಸಲು ಹೊರಟಾಗ ತೆರೆದುಕೊಳ್ಳುವ ಆಯಾಮಗಳು ಬಹುಮುಖೀ ಯಾದವುಗಳು ಇವುಗಳ ವಿವರಣೆಯನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ನನ್ನ ಪ್ರಬಂಧದ ಕೇಂದ್ರವ್ಯಕ್ತಿ ಮೂಡ್ನಾಕೂಡು ಚಿನ್ನಸ್ವಾಮಿಯವರ ಬದುಕು ಬರಹಗಳು, ಸಂದ ಪ್ರಶಸ್ತಿ ಪುರಸ್ಕಾರಗಳ ಕಿರುಪರಿಚಯ ನಿಡಲಾಗಿದೆ.

ಮೂರನೇ ಅಧ್ಯಾಯ ಚಿನ್ನಸ್ವಾಮಿಯವರ ಕಾವ್ಯಗಳಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ ಹಾಗೂ ಅಭಿವ್ಯಕ್ತಿ ನೆಲೆಗಳು ಎಂಬ ಮುಖ್ಯ ಶೀರ್ಷಿಕೆಯಡಿಯಲ್ಲಿ ದಲಿತನೋವಿನ ಅಭಿವ್ಯಕ್ತಿ ನೆಲೆಗಳನ್ನು ಹಲವು ಕವಿತೆಗಳ ಮೂಲಕ ಕಟ್ಟಿಕೊಟ್ಟಿರುತ್ತೇನೆ, ಹಾಗೆಯೇ ಸಮಾಜದಲ್ಲಿನ ದಲಿತರು ಮೇಲ್‌ಜಾತಿಯವರ ಅಡಿಯಾಲಾಗಿ ಅಂದರೆ ಜೀತ ಮಾಡಿಕೊಂಡು ನಡೆಸುವ ನಿಕೃಷ್ಠ ಜೀವನದ ದುಸ್ಥಿತಿಯನ್ನು ಹಾಗೂ ಜೀತ ಪದ್ದತಿಯ ಕರಾಳ ಮುಖದ ಚಿತ್ರಣವನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕಟ್ಟಿಕೊಟ್ಟಿದ್ದೇನೆ.

ನಾಲ್ಕನೇ ಅಧ್ಯಾಯದಲ್ಲಿ ಅಸ್ಪೃಶ್ಯ ಆಚರಣೆಯ ನಿವಾರಣಾ ಮಾರ್ಗಗಳ ಕುರಿತು ಚರ್ಚಿಸಿದ್ದೇನೆ ಅದರಲ್ಲಿ ದಲಿತರಿಗೆ ಪ್ರತಿಭಟನೆಯ ಮೂಲಕ ಮಾತ್ರ ಅಸ್ಪೃಶ್ಯತೆಯ ನಾಶ ಸಾಧ್ಯ ಎಂದೂ ತಿಳಿಸುವ ಸಲುವಾಗಿ ದಲಿತರು ತಮ್ಮ ಸ್ವಾತಂತ್ರ್ಯಕ್ಕಾಗಿ, ಅಸಮಾನತೆಯನ್ನು ಹೋಗಲಾಡಿಸಿ ಸಮಾನತೆಯನ್ನು ಕಾಪಾಡಲು, ದಲಿತತ್ವದ ನೋವನ್ನು ಹೋಗಲಾಡಿಸಲು ಹಲವು ವಿಧಗಳಲ್ಲಿ ಪ್ರತಿಭಟನೆ ಮಾಡಬೇಕೆಂದು ತಿಳಿಸಿದ್ದೇನೆ. ಅದರಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪ್ರತಿಭಟನೆಯ ಮೂಲಕ ಸಮಾನತೆಯನ್ನು ಸಾಧಿಸಬಹುದೆಂದು ನಿವಾರಣಾ ಮಾರ್ಗಗಳನ್ನು ನೀಡಿದ್ದೇನೆ.

ಐದನೇ ಅಧ್ಯಾಯನದಲ್ಲಿ ಚಿನ್ನಸ್ವಾಮಿಯವರ ಕಾವ್ಯಗಳ ಅಭಿವ್ಯಕ್ತಿ ಕ್ರಮ ಅಥವಾ ನಿರೂಪಣ ಕ್ರಮ ಕುರಿತು ಹೇಳಿದ್ದೇನೆ. ಇದರಲ್ಲಿ ಚಿನ್ನಸ್ವಾಮಿಯವರು ತಮ್ಮ ಕಾವ್ಯಗಳಲ್ಲಿ ಬಳಸಿರುವ ಭಾಷೆ ಮತ್ತು ಶೈಲಿ ಹಾಗೂ ಕವಿತೆಯು ಒಳಗೊಂಡಿರುವ ಪ್ರತಿಮೆ, ರೂಪಕ, ಸಂಕೇತಗಳನ್ನು ಹಲವು ನೆಲೆಯಲ್ಲಿ ಕಟ್ಟಿಕೊಟ್ಟಿದ್ದೇನೆ.

ಈ ಮೇಲಿನ ಅಧ್ಯಾಯದಲ್ಲಿ ದಲಿತರ ಮೇಲಿನ ದೌರ್ಜನ್ಯ, ಕ್ರೌರ್ಯ, ಶೋಷಣೆ ಹಾಗೂ ಹಸಿವು ಬಡತನದ ಕರಾಳ ರೂಪಗಳು ಹಂತ ಹಂತವಾಗಿ ಚಿತ್ರಿತಗೊಂಡಿರುವುದನ್ನು ಕಾಣಬಹುದಾಗಿದೆ. ದಲಿತ ಸಂವೇದನೆಯುಳ್ಳ ಚಿನ್ನಸ್ವಾಮಿಯವರ ಬಹುತೇಕ ಕವಿತೆಗಳು ಬುದ್ಧ, ಅಂಬೇಡ್ಕರ್‌ರವರ ಪ್ರಭಾವ ಪಡೆದುಕೊಂಡಿವೆ. ಆದ್ದರಿಂದ ದಲಿತರಲ್ಲಿ ಹೆಚ್ಚು ರೋಷ ಕೆರಳಿಸಿ, ಸಮಾನತೆಯ ಬದಿಯತ್ತ ದಲಿತ ಮನಸ್ಸಿನ ಹೃದಯಗಳು ತುಡಿಯಲಿ ಎಂದು ಹಾರೈಸಿ ಕವಿಯ ಕವನಗಳಿಗೆ ಧಕ್ಕೆ ಬಾರದಂತೆ ಚರ್ಚಿಸಲು ಪ್ರಯತ್ನಿಸಿದ್ದೇನೆ.

ಕೊನೆಯದಾಗಿ ಆರನೇ ಅಧ್ಯಾಯದಲ್ಲಿ ನನ್ನ ಪ್ರಬಂಧದ ಒಟ್ಟು ನೋಟವನ್ನು ಉಪಸಂಹಾರ, ಆಕರ ಗ್ರಂಥ, ಪರಾಮರ್ಶನ ಗ್ರಂಥಗಳನ್ನು ನೀಡಿ ಸಮಾಪ್ತಿಗೊಳಿಸಿರುತ್ತೇನೆ.

'ದಲಿತ' ಎಂಬ ಪದವನ್ನು ಅರ್ಥೈಸಲು ವ್ಯಾಖ್ಯಾನಿಸಲು ಹಲವಾರು ಜನರು ಪ್ರಯತ್ನಿಸಿದ್ದಾರೆ. ಕೇವಲ ದಲಿತ ಅಧೀನತೆಯಿಂದ ಹೊರಗಿರುವ ಬರಹಗಾರರೂ ಸಹ ಅಷ್ಟೇ ಆಸಕ್ತಿಯಿಂದ ಅದನ್ನು ಚರ್ಚಿಸಿರುವುದು ವಿಶೇಷ.

'ಕರ್ನಾಟಕದ ಬರಹಗಾರರ ಮತ್ತು ಕಲಾವಿದರ ಒಕ್ಕೂಟ'ದ ಸಂದರ್ಭದಲ್ಲಿ ಇದನ್ನು ವಾಖ್ಯಾದ ಚೌಕಟ್ಟಿನಲ್ಲಿ ಬಂಧಿಸಿಡುವ ಪ್ರಯತ್ನ ಆರಂಭವಾಯಿತು ನಂತರ ಇದರ ಬಿರುಸಿನ ಚರ್ಚೆ ದಲಿತ-ಬಂಡಾಯ ವೇದಿಕೆಯಲ್ಲಿ ಕಾಣಿಸಿಕೊಂಡಿತು. ಕಾಲ ಉರುಳುತ್ತ ಹೋದರು ಇಂದಿಗೂ ವ್ಯಕ್ತಿಗತವಾದ ವ್ಯಾಖ್ಯಾನಗಳೇ ಬಳಕೆಯಲ್ಲಿವೆ.

ಶೋಷಣೆ ಎಂಬ ಪದಕ್ಕೆ ಜಾತಿ ಭೇದವಿಲ್ಲ, ಆರ್ಥಿಕ, ಸಾಮಾಜಿಕ, ರಾಜಕಿಯ, ರಂಗದಲ್ಲೆಲ್ಲ ಶೋಷಣೆಗೆ ಒಳಗಾದ ಎಲ್ಲಾ ಜನರು ದಲಿತರೆಂದೇ ಗುರುತಿಸಿಕೊಳ್ಳುತ್ತರೆ, ಹಾಗೆಯೇ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರು ದಲಿತರೆ ಎಂದೆ, ಹೇಲಬಹುದಾಗಿದೆ. ಹೀಗೆ ದಲಿತ ಎಂದು ಪದ ಬಹಳಷ್ಟು ಭಿನ್ನ ಭಿನ್ನ ಅರ್ಥಗಳಲ್ಲಿ ಸಂದರ್ಭಗಳಲ್ಲಿ ಬಳಕೆಯಾಗುತ್ತದೆ.

70ರ ದಶಕದ ರಾಜಕೀಯ ರಂಗದಲ್ಲಿ ದಲಿತರನ್ನು ಒಂದು ಬಗೆಯ ವ್ಯಾಖ್ಯಾನಕೊಳ್ಳಪಡಿಸಿದರೆ,ಸಾಮಾಜಿಕ ರಂಗದಲ್ಲಿ ಇನ್ನೊಂದು ಬಗೆಯ ವ್ಯಾಖ್ಯಾನವು ಬಳಕೆಯಾಗುತಿತ್ತು. ಬಂಡಾಯ ವೇದಿಕೆ ಅಸ್ಥಿತ್ವಕ್ಕೆ ಬಂದಾಗ ಎಲ್ಲಾ ಬಡವರನ್ನು ತನ್ನ ತೆಕ್ಕೆಗೆ ಬಳಸಿಕೊಳ್ಳಲು 'ದಲಿತ' ಪದದ ಅರ್ಥವನ್ನು ವಿಸ್ತರಿಸಿಕೊಳ್ಳಲಾಯಿತು, ಇನ್ನೂ ದಲಿತ ಬರಹಗಾರರು ದಲಿತೇತರರ ಸಹಕಾರಕ್ಕಾಗಿ ಎಲ್ಲಾ ವ್ಯಾಖ್ಯಾನಕ್ಕೂ ಬದ್ದರಾದರು.

## 'ದಲಿತ' ಪದ

ದಲಿತ ಎಂಬ ಪದವು ಕೆಲವೊಂದು ಬಾರಿ ಜಾತಿವಾಚಕವಗಿಯೂ, ಕೆಲವುಸಲ ಜನಾಂಗವಾಚಕವಾಗಿಯೂ ಬಳಕೆಯಾಗಿರುವುದನ್ನು ನಾವು ಗಮನಿಸಬಹುದು.

'ದಲ' ಎಂಬುದು ಸಂಸ್ಕೃತ ಪದವಾಗಿದ್ದು 'ದಲ' ಎಂದರೆ ಚೂರು, ತುಂಡು, ಭಾಗ, ಸೈನ್ಯ ಎಂಬ ಅರ್ಥಗಳಿವೆ. ಆದ್ದರಿಂದ ಇಲ್ಲಿ ಸೈನ್ಯದ ಹರಿತವಾದ ಶಸ್ತ್ರ ಎನ್ನುವ ಅರ್ಥ ಸಮಂಜಸವೆಂದು ಕೆಲವರು ವಾದಿಸಿದರೆ, ದಲಿತ ಎಂದರೆ 'ದಮನಕ್ಕೆ ಒಳಗಾದವರು' ಎಂದರ್ಥ ಶತಮಾನಗಳಿಂದ ತುಳಿತಕ್ಕೆ ಒಳಗಾದವರು ಅಸ್ಪ್ರಶ್ಯರೆ ಆಗಿದ್ದಾರೆ. ಹೀಗಾಗಿ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಶಕ್ತಿಗಳ ಜೋತೆಗೆ ಅಸ್ಪ್ರಶ್ಯತೆಯ ಸೂಕ್ತ ಸಂಬಂಧದ ಎಳೆ ಇರುವುದರಿಂದ ದಲಿತ ಎಂದರೆ ಕೇವಲ ಅಸ್ಪ್ರಶ್ಯನಲ್ಲ ಎನ್ನುವುದನ್ನು ಈ ಪದ ವಿವರಿಸುತ್ತದೆ.

ದಲಿತರನ್ನು ಅಸ್ಪ್ರಶ್ಯರು, ಅಂತ್ಯಜರು, ಅಂತ್ಯವಸಾಯಿ, ಅಸ್ಪು, ಆದಮ ಜನಾಂಗ, ತಿರುಕುಲತ್ತರ್, ಪಂಚಮರು, ಬಹಿಷ್ಕೃತರು, ಆದಿಕರ್ನಾಟಕ, ಆದಿದ್ರಾವಿಡ, ಅನುಸೂಚಿತ, ಪರಿಶಿಷ್ಟಜಾತಿ, ಹರಿಜನ ಎಂದು ಮುಂತಾಗಿ ಕರೆಯಿತ್ತಿದ್ದ ಬಗ್ಗೆ ಇತಿಹಾಸದ ಸಾಕ್ಷಿಯೂ ಇದೆ.

'ಹರಿಜನ' ಎಂಬ ಪದವನ್ನು ಮಹಾತ್ಮ ಗಾಂಧೀಜಿಯವರು ಬಳಕೆಗೆ ತಂದರು ಎಂದು ಹೇಳಲಾಗುತ್ತದೆ. ಆದರೆ ವಾಸ್ತವವಾಗಿ 12ನೇ ಶತಮಾನದಲ್ಲೇ ಹರಿದಾಸರು ಅಸ್ಪ್ರಶ್ಯರನ್ನು 'ಹರಿಜನ' ಎಂದು ಕರೆದರು. ಇತಿಹಾಸದಲ್ಲಿ ಹುದುಗಿ ಹೋಗಿದ್ದ ಈ ಪದವನ್ನು ಮಹಾತ್ಮಗಾಂಧೀಜಿಯವರು ಮತ್ತೆ ಬಳಕೆಗೆ ತಂದರು.

## ದಲಿತ ಪ್ರಜ್ಞೆ

'ಪ್ರಜ್ಞೆ' ಎಂಬ ಪದ ಭೂತ-ವರ್ತಮಾನ-ಭವಿಷತ್ಕಾಲಗಳನ್ನು ಒಳಗೊಂಡು ಅವುಗಳನ್ನು ಒಂದು ಸರಣಿಯಲ್ಲಿರಿಸಿ ಪರಿಸರದ ಸ್ಥಿತಿಯನ್ನು ಗ್ರಹಿಸಿ, ಆ ಸ್ಥಿತಿಗೆ ಚಾಲನೆ ನೀಡುವ ಒಂದು ಶಕ್ತಿ ಎಂಬುದನ್ನು ಸಹ ನಾವು ಇದೇ ವ್ಯಾಪ್ತಿಯಲ್ಲಿ ಗ್ರಹಿಸಿದಾಗ ಹೀಗೆ ಹೇಳಬಹುದಾಗಿದೆ.

ದಲಿತ ಮೊದಲು ತಾನು ದಲಿತ ಎನ್ನುವುದನ್ನು ಒಪ್ಪಿಕೊಂಡು ಬಹಿರಂಗವಾಗಿ ಅದನ್ನು ಎದೆತಟ್ಟಿ ಹೇಳಿಕೊಳ್ಳುವವನಾಗಿರುತ್ತಾನೆ. ದಲಿತತ್ವವನ್ನು ಅರಿಯಬೇಕೆಂಬ ಹಿರಿದಾಸೆಯುಳ್ಳವನಾಗಿರುತ್ತಾನೆ. ಈತನು ತನ್ನ ಹಕ್ಕುಗಳಿಗಾಗಿ ಹೋರಾಡುವಂಥವನಾಗಿದ್ದು ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ- ಹೀಗೆ ಎಲ್ಲಾರಂಗದಲ್ಲೂ ಎದ್ದು ನಿಲ್ಲಲು ಹಂಬಲಿಸುತ್ತಿರುತ್ತಾನೆ.

ದಲಿತ, ತಾನು ದಲಿತನಾದರೂ ಇತರರಂತೆ ತಾನೂ ಮನುಷ್ಯನೆಂದು ಆತ್ಮ ವಿಶ್ವಾಸವುಳ್ಳವನಾಗಿರುತ್ತಾನೆ ಮತ್ತು ಇತರ ದಲಿತರಲ್ಲಿ ಇದೇ ಆತ್ಮ ವಿಶ್ವಾಸ ಮೂಡಿಸುವವನಾಗಿರುತ್ತಾನೆ, ತನ್ನ ಹಂಬಲ- ಹಿತಸಕ್ತಿಗಳನ್ನು ಕಾಪಾಡಿಕೊಳ್ಳಲು ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಇತರರನ್ನು ಬಳಸಿಕುಳ್ಳುವಂತೆ ಮಾಡುವವನಾಗಿರುತ್ತಾನೆ.

ದಲಿತರಾದವರೆಲ್ಲ ದಲಿತ ಪ್ರಜ್ಞೆಯುಳ್ಳವರಾಗಿರುತ್ತಾರೆಂದಲ್ಲ ದಲಿತ ಪ್ರಜ್ಞೆ ಇಲ್ಲದವರು ದಲಿತರಲ್ಲವೆಂದಲ್ಲ ಅವರನ್ನು ಪ್ರಜ್ಞಾವಂತ ದಲಿತ ಜನತೆಯನ್ನಾಗಿಸಲು ಹಂಬಲಿಸುವುದು ಮುಖ್ಯ ಇಲ್ಲಿ ಸಾಂಪ್ರದಾಯಿಕ ಹಾಗೂ ಪ್ರಗತಿಪರ ಎಂಬ ಎರಡು ವರ್ಗಗಳು ಇದ್ದೇ ಇರುತ್ತವೆ ಎನ್ನುವ ವಾಸ್ತವ ಪ್ರಜ್ಞೆಯ ಅರಿವಿರಬೇಕು.

## ದಲಿತ ಸಾಹಿತ್ಯ –ಚಳುವಳಿ : ಹಿನ್ನಲೆ

ಕನ್ನಡ ಸಾಹಿತ್ಯ ಸುಮಾರು ೧೬೦೦ ವರ್ಷಗಳ ಇತಿಹಾಸವನ್ನು ಹೊಂದಿದೆ. ಅದು ಇಂದಿನವರೆಗೆ ಅನೇಕ ಹೊಸ ತಿರುವುಗಳನ್ನು, ಬದಲಾವಣೆ ಮುಖಗಳನ್ನು ಕಂಡಿದೆ. ಪಂಪನಿಂದ ಹಿಡಿದು ಆಧುನಿಕ ಕಾಲದವರೆಗೂ ಸಾಹಿತ್ಯವು ನಾನಾ ಮುಖಗಳನ್ನು ಒಳಗೊಂಡು ಬೆಳೆದು ಬಂದಿದೆ. ಹೊಸಗನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ ದಲಿತ ಮತ್ತು ಬಂಡಾಯ ಎಂಬ ಐದು ಪ್ರಮುಖ ಘಟ್ಟಗಳಲ್ಲಿ ನೋಡಬಹುದಾಗಿದೆ. ೨೦ನೇ ಶತಮಾನದ ಹೊಸಗನ್ನಡ ಸಾಹಿತ್ಯ ಹೆಚ್ಚು ವೈವಿಧ್ಯತೆಗಳನ್ನು ಒಳಗೊಂಡು ಶ್ರೀಮಂತವಾಗಿದೆ. ಇಲ್ಲಿ ಪ್ರತಿಯೊಂದು ಕಾಲಘಟ್ಟ ತನ್ನದೇ ಆದ ವಿಶಿಷ್ಟವಾದ ಮಹತ್ವವನ್ನು ಹೊಂದಿದೆ. ಅದರಲ್ಲೂ ಹೊಸಗನ್ನಡ ದಲಿತ ಬಂಡಾಯ ಚಳುವಳಿಗೆ ತನ್ನದೇ ಆದ ವಿಶಿಷ್ಟ ಚಾರಿತ್ರಿಕ ಮಹತ್ವವಿದೆ. ೧೯೭೫ ರಿಂದ ಸಾಮಾಜಿಕ ಕಾಳಜಿಯನ್ನೇ ಪ್ರಧಾನ ಆಶಯವನ್ನಾಗಿಸಿಕೊಂಡು ಈ ಸಾಹಿತ್ಯ ಚಳವಳಿ ಪ್ರಾರಂಭವಾಯಿತೆಂದು ತಿಳಿದು ಬರುತ್ತದೆ.

ದಲಿತ ಮತ್ತು ಬಂಡಾಯ ಚಳುವಳಿ ಜೊತೆ ಜೊತೆಯಾಗಿ ಬೆಳೆದು ಬಂದಿರುವಂಥಹದ್ದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಗಮನಾರ್ಹವಾದ ಸಂಗತಿ. ಇವುಗಳಲ್ಲಿ ಹೇಳಿಕೊಳ್ಳುವಂತಹ ವ್ಯತ್ಯಾಸಗಳಿಲ್ಲ. ಕೆಳವರ್ಗದ ಜನತೆಯ ಬರಹವನ್ನು ದಲಿತ ಸಾಹಿತ್ಯವೆಂದು ಎಲ್ಲಾ ಜಾತಿ ವರ್ಗದ ಶೋಷಿತರ ಪರವಾಗಿ ರಚಿತವಾದ ಬರಹವನ್ನು ದಲಿತ ಸಾಹಿತ್ಯವೆಂದು ಎಲ್ಲಾ ಜಾತಿ ವರ್ಗದ ಶೋಷಿತರ ಪರವಾಗಿ ರಚಿತವಾದ ಬರಹವನ್ನು ಬಂಡಾಯ ಸಾಹಿತ್ಯವೆಂದು ಕರೆಯಲಾಗುತ್ತದೆ.

ಕನ್ನಡ ಸಾಹಿತ್ಯ ಪರಂಪರೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಲ್ಲಲ್ಲಿ ದಲಿತ ಪರವಾದ ಆಶಯಗಳು ಗೋಚರವಾಗುತ್ತವೆ. 'ಮಾನವ ಜಾತಿ ತಾನೊಂದೇ ವಲಂ' ಎಂಬ ಪಂಪನ ಕಾವ್ಯದಿಂದ ಮೊದಲುಗೊಂಡು ವಚನ ಸಾಹಿತ್ಯ, ದಾಸಸಾಹಿತ್ಯ, ಸರ್ವಜ್ಞ ಮೊದಲಾದವರಲ್ಲಿ ಮುಂದುವರೆದು ನವೋದಯದಲ್ಲಿ ಚಾಚಿಕೊಂಡು ಮುಂದೆ ೭೦ರ ದಶಕದಲ್ಲಿ ದಲಿತ ಪರವಾದ ಕಾಳಜಿ ವ್ಯಾಪಕವಾಗಿ ಬೆಳೆದು ಬಂದಿದೆ.

ದಲಿತ ಸಾಹಿತ್ಯವನ್ನು ಅವಲೋಕಿಸುವ ಸಂದರ್ಭದಲ್ಲಿ ೧೨ನೇ ಶತಮಾನದ ವಚನ ಚಳುವಳಿಯನ್ನು ಗಮನಿಸಬೇಕಾಗುತ್ತದೆ. ವಚನ ಸಾಹಿತ್ಯದಲ್ಲಿ ಸುಧಾರಣೆಗಳು ಹೆಚ್ಚಾಗಿ ನಡೆದವು. ದಲಿತ ಸಾಹಿತ್ಯಕ್ಕೆ ಹಿನ್ನೆಲೆ ಎಂದರೆ ವಚನ ಸಾಹಿತ್ಯವೂ ಕೂಡ ಎಂದು ಹೇಳಬಹುದು. ಅನೇಕ ಕೆಳವರ್ಗದ ದಲಿತ ವಚನಕಾರರನ್ನು ನೀಡಿದ್ದು ವಚನ ಸಾಹಿತ್ಯದ ಹಿರಿಮೆಯಾಗಿದೆ. ಈ ವಚನ ಚಳುವಳಿಯಲ್ಲಿ ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ,

ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ ಮುಂತಾದ ದಲಿತ ವರ್ಗದ ಕವಿಗಳು ತಮ್ಮ ಅನುಭವಗಳನ್ನು ವಚನಗಳ ಮೂಲಕ ನೀಡಿದರು.

'ದಲಿತ' ಎಂಬ ಪದವು ಸಾಕಷ್ಟು ಗೊಂದಲದಿಂದ ಕೂಡಿದೆ. ದಲಿತ ಎಂದರೆ ದಳ, ಗುಂಪು, ಸೈನ್ಯ, ಶೋಷಿತ, ಹಿಂದುಳಿದವರು, ಆರ್ಥಿಕವಾಗಿ, ಸಾಮಾಜಿಕವಾಗಿ ಕೆಳಮಟ್ಟದವರು ಹೀಗೆ ಅನೇಕ ಶಬ್ದಕೋಶದ ಅರ್ಥಗಳಿವೆ.

'ದಲಿತ' ಎಂದರೆ ಹಿಂಸೆಗೆ ಒಳಗಾದ, ತುಳಿತಕ್ಕೆ ಒಳಗಾದ, ಶೋಷಣೆಗೆ ಒಳಗಾದ ಅರ್ಥದಿಂದ ಹಿಡಿದು ಅದೊಂದು ಜೀವನ ಪದ್ದತಿ ಎನ್ನುವವರೆಗೆ ಅದರ ಅರ್ಥಗಳನ್ನು ವಿಸ್ತರಿಸಲಾಗಿದೆ. 'ದಲ' ಎಂಬ ಸಂಸ್ಕೃತ ಶಬ್ದದಿಂದ ಬಂದುದ್ದು 'ದಲಿತ', 'ದಲ'ದ ದಲನಕ್ಕೆ ಒಳಗಾದವರು ದಲಿತರು', ದಲ ಎಂದರೆ ಚೂರು, ತುಂಡು ಭಾಗ ಛಿದ್ರವಾದವರು. ದಲನ ಕ್ರಿಯೆಗೆ ಒಳಗಾದವರು ಯಾರೋ, ಶೋಷಿತರು ಯಾರೋ, ಅವರೇ ದಲಿತರು. ಕರ್ನಾಟಕದಲ್ಲಿ ದಲಿತ ಪದವನ್ನು ಚಲಾವಣೆಗೆ ತಂದವರು ದಲಿತ ಸಂಘಟನೆ ಎಂದರೆ ದಲಿತ ಕ್ರಿಯಾ ಸಮಿತಿ".[೧]

ದಲಿತ ಪದ ಕನ್ನಡಕ್ಕೆ ಮರಾಠಿ ದಲಿತ ಸಾಹಿತ್ಯದಿಂದ ಬಂದಿತ್ತು. ದಲಿತ ಪ್ಯಾಂಥರ್ಸ್ ಎಂಬ ಸಂಘಟನೆಯಿಂದ ಅಲ್ಲಿ ದಲಿತ ಸಾಹಿತ್ಯ ಪ್ರಾರಂಭವಾಯಿತು. ಡಾ.ಬಿ.ಆರ್.ಅಂಬೇಡ್ಕರ್ ಸಮೂಹವನ್ನು ತಮ್ಮ ಬರವಣಿಗೆಯಲ್ಲಿ "Depressed Class" ಎಂದು ಗುರುತಿಸಿ ಇದರ ಏಳಿಗೆಯತ್ತ ತಮ್ಮ ರಾಜಕೀಯ ಇಚ್ಛಾಶಕ್ತಿಯನ್ನು ಹರಿಸಿದರು.

ಯಾರು ಶೋಷಿತರೋ ಅವರೇ ದಲಿತರು. ದಲಿತ ಎಂಬುವುದು ಎಲ್ಲಾ ಶೋಷಿತರನ್ನು ಒಳಗೊಳ್ಳುವುದಂತಹದು. ಅಸ್ಪೃಶ್ಯರು, ಶ್ರಮಜೀವಿಗಳು, ಭೂಹೀನರು, ಕೃಷಿ ಕಾರ್ಮಿಕರು, ಆದಿವಾಸಿಗಳು, ಮುಸ್ಲಿಮರು ಶೋಷಣೆಗೆ ಒಳಗಾದ ಮಹಿಳೆಯರು ಇಂತಹ ತುಳಿತಕೊಳ್ಳಗಾದವರೇ ದಲಿತರೆಂಬುವುದು ದಲಿತ ಪ್ಯಾಂಥರ್ಸ್ ವ್ಯಾಖ್ಯಾನ. ಸಾಮಾನ್ಯವಾಗಿ ಆರ್ಥಿಕವಾಗಿ ನಿರಂತರವಾಗಿ ಶೋಷಣೆಗೊಳಗಾದವರೇ ದಲಿತರೆಂಬ ಭಾವನೆ ಎಲ್ಲೆಡೆ ಇರುವಂಥದ್ದು.

ಸಾಹಿತ್ಯಿಕ ಹಿನ್ನೆಲೆಯಲ್ಲಿ ಗಮನಿಸುವುದಾದರೆ ವಚನ ಸಾಹಿತ್ಯದಿಂದಲೂ ಇದು ಪ್ರೇರಣೆ ಪಡೆದಿದೆ. ಅದರ ಜೊತೆಗೆ ಸಾಹಿತ್ಯೇತರ ಪ್ರೇರಣೆಗಳು ಹಿನ್ನೆಲೆಯಾಗಿ ಕೆಲಸ ಮಾಡಿದವು. ಮುಖ್ಯವಾಗಿ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ಮುಂತಾದ ಎಡಪಂಥೀಯ ಸಿದ್ಧಾಂತಗಳು ಈ ಸಾಹಿತ್ಯದ ಮೇಲೆ ಪ್ರಭಾವ ಬೀರಿದವು. ಅಲ್ಲದೇ ಭಾರತೀಯ ಅನ್ಯ ಭಾಷೆಯ ಸಾಹಿತ್ಯದ ಪ್ರಭಾವವೂ ಆಗಿದೆ. ದಕ್ಷಿಣ ಆಫ್ರಿಕಾದ ಕಪ್ಪು ಸಾಹಿತ್ಯವು ದಲಿತ ಸಾಹಿತ್ಯದ ಮೇಲೆ ಪ್ರಭಾವ ಬೀರಿದೆ ಎಂದು ಹೇಳಲಾಗುತ್ತದೆ. "ದಲಿತ ಸಾಹಿತ್ಯವನ್ನು ಆಫ್ರಿಕಾದ ನೀಗ್ರೋ ಸಾಹಿತ್ಯದ ಜೊತೆಗೆ ಹೋಲಿಸಲಾಗುತ್ತದೆ. ಆಫ್ರಿಕಾದ ನೀಗ್ರೋಗಳನ್ನು ಯುರೋಪಿನ ಬಿಳಿಯರು ಗುಲಾಮರನ್ನಾಗಿ ನಡೆಸಿಕೊಂಡಿದ್ದಾರೆ.

ಹಾಗೆಯೇ ಹಿಂದೂ ಮತ್ತು ಹಿಂದೂ ಧರ್ಮಿಯರು ಸ್ವಧರ್ಮಿಯರೇ ಆದ ದಲಿತರನ್ನು ಪಶು–ಪಕ್ಷಿಗಳಿಗಿಂತ ಕಡೆಯಾಗಿ ಕಂಡಿದ್ದಾರೆ."[೨]

ದಲಿತ ಚಳುವಳಿಯು ಪ್ರಾರಂಭವಾಗಲು ಹಲವಾರು ಪ್ರಕರಣಗಳು ಕಾರಣವಾಗಿವೆ. ಅವುಗಳಿಂದ 'ದಲಿತ' ಎಂಬ ಹೆಸರಿನಲ್ಲಿ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ೧೯೭೩ ರಲ್ಲಿ ಬಿ.ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು 'ಬೂಸಾ' ಎಂದು ಟೀಕಿಸಿದ್ದರು. ಇದರಿಂದ ಕೋಪಗೊಂಡ ಪರಂಪರಾ ಪ್ರಿಯರು ಅವರು ಮಂತ್ರಿ ಪದವಿ ತ್ಯಜಿಸುವಷ್ಟು ಒತ್ತಡ ತಂದರು ಇದರ ಪರಿಣಾಮವಾಗಿ ಶೋಷಿತ ಸಮಯದಾಯದಲ್ಲಿ, ವಿಚಾರವಂತರಲ್ಲಿ ಒಂದು ಹೊಸ ಜಾಗೃತಿ ಮೂಡಿತು. ಅವರೆಲ್ಲಾ ಇದನ್ನು ವಿರೋಧಿಸಿ ಚಳುವಳಿಯನ್ನು ಪ್ರಾರಂಭಿಸಿದರು. ಇದು ದಲಿತ ಚಳುವಳಿಯ ಆರಂಭಕ್ಕೆ ಮುಖ್ಯ ಪ್ರೇರಣೆಯಾಯಿತು. ಆ ನಂತರ ೧೯೭೪ ರಲ್ಲಿ ಭದ್ರಾವತಿಯಲ್ಲಿ ದಲಿತ ಸಂಘರ್ಷ ಸಮಿತಿ ಹುಟ್ಟಿಕೊಂಡಿತ್ತು ಮುಂದೆ ಇದು ಕರ್ನಾಟಕ ದಲಿತ ಸಂಘರ್ಷ ಸಮಿತಿ ಎಂದೆನಿಸಿಕೊಂಡು ದಲಿತ ಪರವಾದ ಧ್ವನಿ ಎತ್ತಿತ್ತು. ೧೯೭೬ರಲ್ಲಿ ಭದ್ರಾವತಿಯಲ್ಲಿ 'ದಲಿತ ಬರಹಗಾರರ ಯುವ ಸಂಘಟನೆ' ಹುಟ್ಟಿಕೊಳ್ಳಲು ಕಾರಣವಾಯಿತು. ಇವುಗಳಲ್ಲದೇ, ದಲಿತ ಕಲಾಮೇಳ, ಯುವ ಮೋರ್ಚಾ ತುರ್ತು ಪರಿಸ್ಥಿತಿ, ಭೂ ಸುಧಾರಣೆ, ಮೀಸಲಾತಿ, ಕಮ್ಯುನಿಷ್ಟರ ಚಳುವಳಿ, ಗಾಂಧೀವಾದ ಇವುಗಳು ದಲಿತ ಚಳುವಳಿ ಹುಟ್ಟಲು ಕಾರಣವಾಗಿದೆ.

ಕನ್ನಡ ದಲಿತ ಸಾಹಿತ್ಯ ಚಳುವಳಿಗೆ ಹಿನ್ನೆಲೆಯಾಗಿ ಒಂದು ಪರಂಪರೆ ಇತ್ತಲ್ಲದೇ, ಅದರ ಒಬ್ಬೊಟ್ಟಿಗೆ ಬೆಳೆಯುತ್ತಿದ್ದ ಬಂಡಾಯ ಸಾಹಿತ್ಯ ಚಳುವಳಿಯ ಪ್ರಾಮಾಣಿಕ ಒತ್ತಾಸೆಯೂ ಇತ್ತು. [೩]"ಕನ್ನಡ ಸಾಹಿತ್ಯಕ್ಕೆ ಹೊಸ ಕಾಯಕಲ್ಪ ನಡೆದು, ಹೊಸ ಚಾಲನೆ ಬಂದಿದ್ದು ದಲಿತ ಸಾಹಿತ್ಯದಿಂದ ಒಂದರ್ಥದಲ್ಲಿ ನವ್ಯ ಕಾವ್ಯ, ಕನ್ನಡ ಸಾಹಿತ್ಯಕ್ಕೆ ಉಂಟುಮಾಡಿದ್ದ ಅಪಾಯದಿಂದ ಪಾರು ಮಾಡಿದ್ದು ದಲಿತ ಸಾಹಿತ್ಯವೆ". ಎಂದು ಹೇಳಿ 'ಮಡಿಯ ಸಾಹಿತ್ಯ ಬೇಗ ಮಡಿಯಲೇ ಬೇಕಲ್ಲವೆ"[೩] ಎಂದು ಸಾಹಿತಿಯಾದ ಕಮಲಾ ಹಂಪನಾ ದಲಿತ ಸಾಹಿತ್ಯದ ನಿಲುವನ್ನು ದೃಢಪಡಿಸುತ್ತಾರೆ.

ದಲಿತ ಸಾಹಿತ್ಯವು ಅತ್ಯಂತ ಸಹಜವಾದ ದಲಿತರಿಂದಲೇ ಆರಂಭವಾಗಿದೆ. ಇದುವರೆಗೆ ಮೂಕರಾಗಿದ್ದ ದಲಿತ ಸಮುದಾಯದಲ್ಲಿ ಎಚ್ಚೆತ್ತ ಸಾಹಸಿಗಳು ತಮ್ಮ ಸಮುದಾಯದ ಮೇಲೆ ನಡೆದ ಶೋಷಣೆ, ದಬ್ಬಾಳಿಕೆ ವಿರುದ್ಧ ಹೋರಾಟದ ರೂಪದಲ್ಲಿ ಬರೆಯತೊಡಗಿದ್ದರು. ಇದು ತುಂಬಾ ಮಹತ್ವವಾದ ಸಂಗತಿಯಾಗಿದೆ. ತಲತಲಾಂತರಗಳಿಂದ ತುಳಿಯಲ್ಪಟ್ಟಿರುವ ಈ ವರ್ಗದ ಜನತೆ ತಮ್ಮ ಈ ಸ್ಥಿತಿಗೆ ಕಾರಣವಾದವರ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುವ ಮೂಲಕ ಕಾವ್ಯವನ್ನು ರಚಿಸತೊಡಗಿದರು. ತಮ್ಮ ಚಿಂತನೆಗಳಿಗೆ ಆತ್ಮಾಭಿಮಾನ ಮೂಡಿಸಿಕೊಂಡು, ನೋವನ್ನು ತೋಡಿಕೊಂಡು ನ್ಯಾಯಕ್ಕಾಗಿ ಹೋರಾಡುವ ಉತ್ಸಾಹದಿಂದ ಚಿಮ್ಮಿತು ಇವರ ಸಾಹಿತ್ಯ. ಇದರ ಫಲವಾಗಿ ದಲಿತ ಸಾಹಿತ್ಯವು ತಮ್ಮ ದೈನಂದಿನ ಜೀವನದ ಆಗು ಹೋಗುಗಳು, ತಾವು ಅಸ್ಪೃಶ್ಯತೆಗೆ ಒಳಗಾಗಿ ಒಡೆದ ನೋವು, ವ್ಯಥೆಗಳನ್ನು

ಸಾಹಿತ್ಯದ ಮೂಲಕ ರಚಿಸತೊಡಗಿದರು. ಆನ ಸಾಮಾನ್ಯರ ನೋವು, ಶೋಷಣೆಗಳನ್ನು ಹೇಳುವುದರ ಜೊತೆಗೆ ಅವರಲ್ಲೇ ಇರುವ ಅಜ್ಞಾನ, ಅಂಧಕಾರ ಸಂಪ್ರದಾಯಗಳು, ಅನಕ್ಷರತೆ ಅಸಹಾಯಕತೆಗಳ ಬಗ್ಗೆ ಅರಿವು ಮೂಡಿಸುತ್ತಾ ಜೀತಪದ್ಧತಿ, ವರ್ಗಪದ್ಧತಿ ಹಾಗೂ ಯಜಮಾನ ಸಂಸ್ಕೃತಿಯ ವಿರುದ್ಧ ಹೋರಾಟ ನಡೆಸುವಂತೆ ಕರೆಯಿತ್ತರು.

ಇಂದು ಕನ್ನಡ ದಲಿತ ಸಾಹಿತ್ಯ ಅನೇಕ ರೂಪಗಳಲ್ಲಿ ಕಾಣಿಸಿಕೊಂಡಿದೆ. ಮುಖ್ಯವಾಗಿ ಕಥೆ, ಕಾವ್ಯ, ಕಾದಂಬರಿ, ನಾಟಕ, ಆತ್ಮಕಥೆ, ಸಂಶೋಧನೆ, ವಿಚಾರ, ವಿಮರ್ಶೆ ಮತ್ತು ಪ್ರವಾಸ ಕಥನಗಳು ಉಲ್ಲೇಖಾರ್ಹವಾದವಾಗಿವೆ. ಇವುಗಳಲ್ಲಿ ಬಳಕೆಯಾದ ಭಾಷೆ, ಬಂಧ, ಶೈಲಿ, ಸಂಭಾಷಣೆ, ತಂತ್ರಗಳು ಕನ್ನಡ ದಲಿತ ಸಾಹಿತ್ಯಕ್ಕೆ ಒಂದು ವಿಶಿಷ್ಟ ನೆಲೆಯನ್ನು ಒದಗಿಸಿದೆ. ಇದು ದುಡಿದು ಸಮುದಾಯದ ಸಾಹಿತ್ಯ ಇದರಲ್ಲಿ ಮರುಜೀವ ನಿರ್ಮಾಣದ ಆಶಯ, ಸಮಾಜಕ್ಕೆ ಹಂಬಲ, ಸಮಾನತೆಯ ಕನಸುಗಳು ಮೂಡಿಬಂದಿದೆ. ಕನ್ನಡ ದಲಿತ ಸಾಹಿತ್ಯದ ಕಾಲಘಟ್ಟದಲ್ಲಿ ಸಿದ್ದಲಿಂಗಯ್ಯ ಮೊದಲು ತಮ್ಮನ್ನು ಗುರುತಿಸಿಕೊಂಡರು. ಇವರ 'ಹೊಲೆ ಮಾದಿಗರ ಹಾಡು' ಕವನ ಸಂಕಲನವು ದಲಿತ ಸಾಹಿತ್ಯಕ್ಕೆ ಭದ್ರ ಬುನಾದಿಯನ್ನು ಹಾಕಿಕೊಟ್ಟಿತು. ದೇವನೂರು ಮಹಾದೇವರವರ ಅಮಾಸ, ಒಡಲಾಳ, ಕುಸುಮಬಾಲೆ ಕೃತಿಗಳು ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿ, 'ನೆಲದ ಜೋಗುಳ' ಮಹಾಕಾವ್ಯ, ಮಾಲಗತ್ತಿಯವರ 'ಕಾರ್ಯ' ಕಾದಂಬರಿ, ಮೂಕನಿಗೆ ಬಾಯಿ ಬಂದಾಗ', 'ಮೂರನೆ ಕಣ್ಣು' ಕವನ ಸಂಕಲನಗಳು, ಸಿದ್ದಯ್ಯನವರ 'ಬಕಾಲ', ಸತ್ಯಾನಂದ ಪಾತ್ರೋಟ 'ಜಾಜಿ ಮಲ್ಲಿಗೆ', ಮ.ನ.ಜರವರ 'ಮಾಗಿ ಕಾದಂಬರಿ ಮುಂತಾದವು ದಲಿತ ಜಾಗೃತಿಯನ್ನು ಹೊರಚೆಲ್ಲಿದವು. ಅಲ್ಲದೆ ಬಿ.ಚಿನ್ನಸ್ವಾಮಿ, ಮುನಿವೆಂಕಟಪ್ಪ, ಗೋವಿಂದಯ್ಯನವರ ಕವನಗಳು, ಮೊಗಳ್ಳಿ ಗಣೇಶ್‌ರವರ ಕಥೆಗಳು, ಬಿ.ಟಿ.ಜಾಹ್ನವಿ, ಜನಾರ್ಧನ, ಎರ್ಪಕಟ್ಟೆ, ರಾಮಕೃಷ್ಣ ಹತಗುಂದಿ, ಕಮಲಾಹಂಪನಾ, ರಂಜಾನ್ ದರ್ಗಾ, ಚಿನ್ನಣ್ಣ ವಾಲೀಕಾರ, ಗೀತಾ ನಾಗಭೂಷಣ್, ಬಿ.ಟಿ.ಲಲಿತಾನಾಯಕ್ ಮುಂತಾದವರ ಕೃತಿಗಳು ದಲಿತ ಜಗತ್ತಿನ ಸಾಚಾ ಅನುಭವಗಳೊಂದಿಗೆ ಹೊರಬಂದು ಭೂತಕಾಲ, ವರ್ತಮಾನ ಮತ್ತು ಭವಿಷ್ಯತ್ತುಗಳನ್ನು ಒಂದೇ ಕಾಲದಲ್ಲಿ ಯೋಚಿಸಲು ಸಾಧ್ಯವಾಗಿದೆ.

ಕನ್ನಡದ ದಲಿತ ಆತ್ಮಕತೆಗಳಿಗೆ ಮರಾಠಿ ಲೇಖಕರ ಆತ್ಮಕತೆ ಪರಿಣಾಮ ಬೀರಿವೆ. ಆದರೆ ಇವು ಮರಾಠಿ ಸಾಹಿತ್ಯದಷ್ಟು ಆತ್ಮವಿಶ್ವಾಸವನ್ನು ಹೊಂದಿಲ್ಲ ಎಂಬುವುದು ವಿಮರ್ಶಕರ ಅಭಿಪ್ರಾಯಗಳಾಗಿವೆ. ಗೌರ್ಮೆಂಟ್ ಬ್ರಾಹ್ಮಣ, ಮಣೆಗಾರ, ಊರುಕೇರಿ, ಮನವಿಲ್ಲದವರ ಮಧ್ಯೆ, ಕತ್ತಾಲೆ ಬೆಳದಿಂಗಳು ಮುಂತಾದ ಕೃತಿಗಳು ದಲಿತ ಲೇಖಕರ ಮನಸ್ಸಿನ ಅಂತರಾಳದ ಹಸಿವನ್ನು, ದುಃಖವನ್ನು ಬರವಣಿಗೆಯ ಮೂಲಕ ದಾಖಲಿಸಿದೆ. ಶೋಷಣೆ, ನಿರಾಶೆ, ಅವಮಾನದಿಂದ ಕಂಗೆಟ್ಟಿದ್ದವರನ್ನು ಸ್ವಾಭಿಮಾನದ ಚಿಲುಮೆಯ ಕಡೆ ಕೊಂಡೊಯ್ಯುವ ಕಾಳಜಿ ಇಲ್ಲಿದೆ. ಇದಕ್ಕೆ ಶಿಕ್ಷಣ, ಸಂಘಟನೆ, ಹೋರಾಟಗಳು ಆಸರೆಯಾಗಿವೆ. ಇಲ್ಲಿ ವೈಯಕ್ತಿಕ ನಿಲುವುಗಳು, ಅನಿಸಿಕೆಗಳು ಸಾಮೂಹಿಕ ಅಂಶದ ನಿಲುವುಗಳಾಗಿವೆ.

ಒಟ್ಟಿನಲ್ಲಿ ದಲಿತ ಸಾಹಿತ್ಯವನ್ನು ಕುರಿತು ಬರೆಯುವುದಾದರೆ, ಡಾ.ಅರವಿಂದ ಮಾಲಗತ್ತಿಯವರು ಹೇಳಿರುವಂತೆ 'ಕಡಲನ್ನು ಕನ್ನಡಿಯಲ್ಲಿ ಹಿಡಿದಿರು ಸಾಹಸವನ್ನು ಮಾಡಿದಂತೆ'.

## ದಲಿತ ಕಾವ್ಯದ ಇತಿಹಾಸ ಮತ್ತು ಧೋರಣೆ

ಆದಿಕವಿ ಪಂಪನಿಂದ ಇಲ್ಲಿಯ ತನಕ ಕಾವ್ಯ ಎಂದರೇನು? ಎಂಬ ಚಿಂತನೆ ನಡೆಯುತ್ತಾ ಬಂದಿದೆ. ಅದು ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗಿದೆ. ಕವಿಗಳು ಯಾರಿಗಾಗಿ ? ಏತಕ್ಕಾಗಿ ಕಾವ್ಯವನ್ನು ಬರೆಯಲು ತೊಡಗಿದರು ಎಂಬುದನ್ನು ಕಾವ್ಯಗಳ ಹಿನ್ನಲೆಯಲ್ಲಿ ಸಾಹಿತ್ಯ ಚರಿತ್ರೆ ತಿಳಿಸುತ್ತದೆ.

೧೬೦೦ ವರ್ಷಗಳ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ೨೦ನೇ ಶತಮಾನವು ಕಾವ್ಯದ ದೃಷ್ಟಿಯಿಂದ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಸುಮಾರು ೮೦ ವರ್ಷಗಳ ಅವಧಿಯಲ್ಲಿ ಹೊಸ ಹೊಸ ತಿರುವು ಪಡೆದು ಬೆಳೆದಿದೆ. ನವೋದಯ, ಪ್ರಗತಿಶೀಲ, ನವ್ಯ ದಲಿತ ಬಂಡಾಯ ಚಳುವಳಿಗೆ ತನ್ನದೇಯಾದ ಮಹತ್ವವಿದೆ. ದಲಿತ ಸಾಹಿತ್ಯವೆಂಬುದು ಕೇವಲ ನಮ್ಮ ಪರಿಸರದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿರುವುದಿಲ್ಲ. ಇತ್ತೀಚಿಗೆ ಭಾರತದಾದ್ಯಂತ ರೂಪುಗೊಳ್ಳುತ್ತಿರುವ ಒಂದು ಜಾಗತಿಕ ಸಾಹಿತ್ಯ ಪ್ರಭೇದವಾಗಿದೆ. ಶತಶತಮಾನಗಳ ಕಾಲ ಧಮನಕ್ಕೊಳಗಾದ ವಿಶಿಷ್ಟ ಧ್ವನಿಯಾಗಿದೆ. ನವೋದಯ, ನವ್ಯ, ಪ್ರಗತಿಶೀಲ ಮುಂತಾದವುಗಳನ್ನು ಗುರುತಿಸಲು ಹೇಗೆ ಲಕ್ಷಣಗಳಿವೆಯೋ ಹಾಗೆಯೇ ದಲಿತ ಸಾಹಿತ್ಯಕ್ಕೂ ಅದರದೇಯಾದ ಗುಣಲಕ್ಷಣ ಧೋರಣೆಗಳಿವೆ

ದಲಿತ ಸಾಹಿತ್ಯವು ಉಗಮವಾಗಲೂ ಅಂಬೇಡ್ಕರ್ ಸ್ಪೂರ್ತಿಯ ಚಿಲುವೆಯಾಗಿದ್ದಾರೆ. ಅವರನ್ನು ಬಿಟ್ಟರೆ ಕಾರ್ಲ್‌ಮಾರ್ಕ್ಸ್‌ನ ಪ್ರಭಾವವಿದೆ. ದಲಿತ ಸಂವೇದನೆ ಮೊದಲು ವಚನಗಳಲ್ಲಿ ಕಂಡುಬಂದರೂ ಅದು ಬರುಬರುತ್ತಾ ಕಡಿಮೆಯಾಯಿತು. ೨೦ನೇ ಶತಮಾನದ ೭೦ರ ದಶಕದಲ್ಲಿ ಅದು ಮತ್ತೆ ಕವಲೊಡೆದು ಬೆಳೆಯಿತು.

ಶತಮಾನಗಳಿಂಥ ನೋವುಂಡ ಜನತೆ ಅಥವಾ ವರ್ಗ ಮಾತನಾಡುವಾಗ ನಯನಾಜೂಕಿನಿಂದ ಮಾತನಾಡಲಾರರು. ಅಕ್ರೋಶಕ್ಕೆ ಒಳಗಾದ ಈ ವರ್ಗ ಮಾತನಾಡುವ ರೀತಿಯೇ ಅಬ್ಬರದಿಂದ ಕೂಡಿರುತ್ತದೆ. ಹಿಂದೂಗಳೆ ಅದರೂ ದಲಿತರನ್ನು ಪಶುಪಕ್ಷಿ, ಪ್ರಾಣಿಗಳಿಗಿಂತ ಕಡೆಯಾಗಿ ಕಂಡಿರುವುದು ಈ ಅಕ್ರೋಶಕ್ಕೆ ಕಾರಣವಾಗಿದೆ ದಲಿತ ಸಾಹಿತ್ಯಕ್ಕೆ ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್, ವಾದಗಳು ಪ್ರೇರಕ ಶಕ್ತಿಯಾಗಿವೆ. ಬಡತನದ ಬೇಗೆಯಲ್ಲಿ ನೊಂದ ಇವರ ಕವನಗಳಲ್ಲಿ ಸಹಜವಾಗಿಯೇ ಪ್ರತಿಭಟನೆ ಅಕ್ರೋಶಗಳೂ ವ್ಯಕ್ತವಾಗಿವೆ.

ಹಲವು ಬಗೆಯ ಶೋಷಣೆಗೆ ಒಳಗಾಗಿ ನಿರ್ಜೀವವಾಗಿದ್ದ ದಲಿತ ಸಮೂಹಕ್ಕೆ ದಲಿತ ಕಾವ್ಯ ಧ್ವನಿಯಾಗಿ ಜನರದಲ್ಲಿ ಹೊಸ ಅರಿವು ಮತ್ತು ಉತ್ಸಾಹವನ್ನು ಮೂಡಿಸಿತು. ಎಲ್ಲರಂತೆ ಸಾವಿರಾರು ಕನಸುಗಳನ್ನು ಕಾಣುವ ದಲಿತರು ಮೇಲ್ವರ್ಗದವರ ತುಳಿತದ ದೆಸೆಯಿಂದ ಅವನ್ನೆಲ್ಲಾ ತಮ್ಮಲ್ಲೇ ಅದುಮಿಟ್ಟುಕೊಂಡಿದ್ದರು. ಜೊತೆಗೆ ತಾವು ಮೇಲ್ವರ್ಗದವರ ಅಧೀನ ಎಂದು ತಿಳಿದಿದ್ದು; ಅವರು ಹೇಳಿದ ಕೆಲಸಗಳನ್ನು ಮಾಡುತ್ತಿದ್ದರು. ಅವರು ಕೊಡುತ್ತಿದ್ದ ಎಂಜಲು ಊಟಕ್ಕಾಗಿ ತುಂಡು ಬಟ್ಟೆಗಾಗಿ ಅವರ ಅಡಿಯಾಳಾಗಿದ್ದರು. ಪರಿಸ್ಥಿತಿ ಹೀಗಿರುವಾಗ ಮುಕ್ತವಾದ ಆಧುನಿಕ ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ದಲಿತರು ಶಿಕ್ಷಣ ಪಡೆದು ಹೊಸ ತಿರುವು ಮೂಡಿಸಿಕೊಂಡರು.

ಈ ಜಾಗೃತಿಯಿಂದ ತಮ್ಮನ್ನು ಆಳ್ವಿಕೆ ಮಾಡುತ್ತಿದ್ದ, ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದ ಶೋಷಣೆಗೆ ಒಳಗು ಮಾಡುತ್ತಿದ್ದವರ ವಿರುದ್ಧ ಸಹಜವಾಗಿಯೇ ಸಿಡಿದೆದ್ದರು. ದಲಿತರು ಗದ್ಯ ಪ್ರಕಾರಕ್ಕಿಂತ ಅವರ ಏರುಧ್ವನಿ ಅವರ ಕಾವ್ಯಗಳಲ್ಲಿ ಮುಗಿಲುಮುಟ್ಟುವಂತೆ ಆಕ್ರೋಶಿಸಿದ್ದಾರೆ.

ಯಾವುದೇ ಬಗೆಯ ತುಳಿತಕ್ಕೊಳಗಾದ ಸಮಾಜದಿಂದ ಧಿಕ್ಕರಿಸಲ್ಪಟ್ಟ ಶೋಷಣೆಗಳ ವಿರುದ್ಧ ಅವರು ಪ್ರತಿಭಟನೆ ಮಾಡಿದ್ದಾರೆ. ದಲಿತ ಕಾವ್ಯಗಳು ನೊಂದವರ ನೋವಿನ ದನಿಯಾಗಿ ಹೋರಾಟವನ್ನು ಮಾಡುವ ಉದ್ದೇಶಕ್ಕಾಗಿ ಬರೆದಂತಹವು ಜಡವಾಗಿ ಸ್ಥಗಿತಗೊಂಡಿದ್ದ ದಲಿತ ಜನಾಂಗವನ್ನು ಬಡಿದೆಬ್ಬಿಸಲು ಈ ಕಾವ್ಯ ಒಂದು ಮಿತಿಯಲ್ಲಿ ಕಾರಣವಾಯಿತು. ಈ ಕಾವ್ಯ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳನ್ನು ಒಳಗೊಂಡಿದ್ದು 'ಪ್ರತಿಭಟನೆ'ಯ ಹೊಸ ರೂಪದಲ್ಲಿ ಹೊರಹೊಮ್ಮಿತು. ಇದನ್ನು ದಲಿತ ಬಂಡಾಯ ಕಾವ್ಯ ಎಂದು ಕರೆಯಲಾಯಿತು.

ದಲಿತ ಕಾವ್ಯದ ಬೆಳವಣಿಗೆಗೆ ಇನ್ನೂ ಅನೇಕ ಕಾರಣಗಳಿವೆ ಬಸವಲಿಂಗಪ್ಪನವರ 'ಬೂಸ ಪ್ರಕರಣ', ಬಂಡಾಯ ಚಳುವಳಿ, ಭೂ ಆಕ್ರಮಣ ಹೋರಾಟ, ಬೆತ್ತಲೆ ಸೇವೆ, ದೇವದಾಸಿ ಪದ್ಧತಿ, ಮಲಹೊರುವ ಪದ್ಧತಿ ವಿರುದ್ಧ ಹೋರಾಟ, ಕುದುರೆ ಮೋತಿ ಪ್ರಕರಣ, ಚುನಾವಣೆಯ ಬಹಿಷ್ಕಾರ, ಸಮುದಾಯ ಸಂಘಟನೆಯ ಹೋರಾಟಗಳು, ಪ್ರಗತಿಪರ ವಿದ್ಯಾರ್ಥಿ ಸಂಘಟನೆಗಳು ನಡೆಸಿದ ಚಳುವಳಿಗಳು ಇವೆಲ್ಲಾ ದಲಿತ ಕಾವ್ಯದ ಬೆಳವಣಿಗೆಗೆ ಕಾರಣವಾಗಿದೆ.

ದಲಿತ ಕಾವ್ಯದ ಮೇಲೆ ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಮತ್ತು ಆಂಧ್ರದ ದಿಗಂಬರ ಕಾವ್ಯಗಳು ಪ್ರಭಾವ ಬೀರಿದೆ. ಮಹಾರಾಷ್ಟ್ರದಲ್ಲಿ ನಡೆದ ದಲಿತ ಪ್ಯಾಂಥರ್ಸ್ ಚಳುವಳಿ ದೇಶದ ದಲಿತ ಸಮುದಾಯಗಳಲ್ಲಿ ಹೊಸ ಜಾಗೃತಿಯನ್ನುಂಟುಮಾಡಿವೆ. ನಗ್ನಮುನಿ, ಶ್ರೀ ಶ್ರೀ ನಿಖಿಲೇಶ್ವರ, ಭೈರವಯ್ಯ, ಜ್ವಾಲಾಮುಖಿ ಈ ಮುಂತಾದ ಆಂಧ್ರದ ವಿಪ್ಲವ ಕವಿಗಳಿಂದ ಕನ್ನಡ ದಲಿತ ಕವಿಗಳು ಪ್ರೇರಣೆ ಪಡೆದಿದ್ದಾರೆ. ಜಾತಿ ವ್ಯವಸ್ಥೆಯನ್ನು ನಾಶಗೊಳಿಸಿ ಮನುಷ್ಯರ ನಡುವೆ ಕಟ್ಟಿರುವ ಗೋಡೆಗಳನ್ನು ಕೆಡುವುದೇ ದಲಿತ ಸಾಹಿತ್ಯದ ಮುಖ್ಯ ಧೋರಣೆಯಾಗಿದೆ.

ಜಾನಪದ ಲಯಗಾರಿಕೆ, ನುಡಿಗಟ್ಟನ್ನು ಕಸಿಮಾಡಿ ದಲಿತ ಕವಿಗಳು ತಮ್ಮ ಕಾವ್ಯೋದ್ದೇಶಕ್ಕಾಗಿ ದುಡಿಸಿಕೊಂಡಿದ್ದರೆ, ಜಾನಪದರಲ್ಲಿ ಅನಕ್ಷರತೆ, ಮುಗ್ಧತೆ ಇದೆ" ಹೀಗಾಗಿ ದಲಿತ ಕವಿಗಳ ಮೇಲೆ ಜಾನಪದದ ಪ್ರಭಾವ ದಟ್ಟವಾಗಿದೆ.

ದಲಿತರಿಗೆ ಮೊದಲು ಕಾಡಿದ್ದ ಸಮಸ್ಯೆಯೆಂದರೆ ಜಾತಿವ್ಯವಸ್ಥೆ ಸಾವಿರಾರು ವರ್ಷಗಳಿಂದ ವರ್ಣವ್ಯವಸ್ಥೆಯಿಂದ ಸಂಕೋಲೆಯಲ್ಲಿ ಬಿಗಿಯಲ್ಪಟ್ಟಿದ್ದರು. ಅದರ ವಿರುದ್ಧ ಸಿಡಿದೆದ್ದು ಅದನ್ನು ಕಾವ್ಯ ಮುಖೇನ ಹೊರ ಹಾಕಿದರು. ಮೊದಲು ದಲಿತರಲ್ಲಿ ಸಿಡಿದೆದ್ದು, ಹೆಜ್ಜೆಯನ್ನು ಹಾಕಿದವರು ಸಿದ್ದಲಿಂಗಯ್ಯನವರು ಎಂದು ಹೇಳಬಹುದು.

ದಲಿತರಲ್ಲದ ಕವಿಗಳು ಪರಂಪರೆಯನ್ನು ವೈಭವೀಕರಿಸಿ ನೋಡಿ ಬರೆದರೆ, ದಲಿತ ಕವಿಗಳು ಪರಂಪರೆಯನ್ನು ಆಕ್ರೋಶ ತುಂಬಿದ ನೋವಿನ ಮನಸ್ಸಿನಿಂದ ನೋಡುತ್ತಾರೆ. ದಲಿತ ಕವಿಗಳ ಕಾವ್ಯದಲ್ಲಿ ಅಬ್ಬರದ ನುಡಿಗಳೊಂದಿಗೆ ಅಂತರಂಗದ ತುಡಿತವೂ ಇದೆ. ಭೋರ್ಗರೆದ ಮಳೆಯಂತೆ ಕಂಡರೂ ಒಳಗೆ ನೋಡಿದಾಗ ತಣ್ಣಗೆ ಅಂತರ್ಜಲವು ಕಾಣಿಸುತ್ತದೆ.

ಸಿದ್ದಲಿಂಗಯ್ಯನವರ ತರುವಾಯ ಹಲವು ಕವಿಗಳು ಸಮಾನತೆಗಾಗಿ ಹೋರಾಡಿದ್ದು ಉಂಟು. ಅವರಲ್ಲಿ ಚೆನ್ನಸ್ವಾಮಿಯವರು ಕೂಡಾ ಒಬ್ಬರಾಗಿದ್ದು, ಇವರ ಕವಿತೆಗಳಲ್ಲಿ ಅಬ್ಬರ, ಆಕ್ರೋಶಗಳು ಮೆಲುದನಿಯಲ್ಲಿ ವ್ಯಕ್ತವಾಗಿವೆ. ಶೋಷಿತರ ಬಡವರ ಪರವಾಗಿ ಮೇಲ್ವರ್ಗದವರ ವಿರುದ್ಧ ಇವರ ಕವಿತೆಗಳು ರಚನೆಗೊಂಡಿವೆ.

ದಲಿತ ಕವಿ ಜನರೊಂದಿಗೆ ಸಂವಾದಿಸುವಾಗ ದಲಿತರು ಬಳಸುವ ಭಾಷೆ, ಹಾಡು, ಕುಣಿತ ಮುಂತಾದವುಗಳನ್ನು ಸಮುದಾಯದಿಂದ ಎತ್ತಿಕೊಳ್ಳಬೇಕಾಗುತ್ತದೆ. ಇದರಲ್ಲಿ ಸಮುದಾಯ ಕೆಲಸ, ಭಾವನೆ, ಮನಸ್ಸುಗಳ ತುಮುಲತೆ ಎಲ್ಲಾ ಅಂಶಗಳು ಕಾವ್ಯವಾಗಿ ಬರುತ್ತವೆ. ಇಲ್ಲಿ ಅವರಿಗೆ ಕ್ರಾಂತಿಕಾರಿಕ ಮನಸ್ಸು ಮೂಡುತ್ತದೆ.

ಕಾವ್ಯವು ಸಿಟ್ಟು, ಅಬ್ಬರ, ರೊಚ್ಚು, ಆವೇಶ ಎಲ್ಲವನ್ನು ಒಳಗಾಗಿಸಿಕೊಂಡು ಮೂಡಿಬಂದರೂ ಇವುಗಳ ಮಧ್ಯೆ ಪ್ರೇಮ ಮತ್ತು ಪ್ರಣಯದಂಥ ಶೃಂಗಾರ ರಸಗಳು ತಮ್ಮದೆಯಾದ ಪ್ರದೇಶ ಭಾಷೆ, ಸಂಸ್ಕೃತಿಯ ಹಿನ್ನೆಲೆಯಲ್ಲಿ ರೂಪುಗೊಂಡಿದೆ.

ದಲಿತ ಸಾಹಿತ್ಯ ಚಳುವಳಿಯ ಅಕ್ಷರಸ್ಥರಿಂದ ಅನಕ್ಷರಸ್ಥರವರೆಗೂ ಹರಡಿದೆ. ಆದರೆ ಈ ಚಳುವಳಿಯಲ್ಲಿ ಭಾಗವಹಿಸಿದವರು ಶಿಕ್ಷತರು ಮಾತ್ರ ಸಾಮಾಜಿಕವಾಗಿ ಎಲ್ಲರನ್ನು ಒಟ್ಟುಗೂಡಿದ್ದು ೧೯೭೪ ರಲ್ಲಿ ನಡೆದ 'ಬೂಸ ಪ್ರಕರಣ' ವಾಗಿದೆ. ಈ ಸಂದರ್ಭದಲ್ಲಿ ದಲಿತ ಕವಿಗಳು ತಮ್ಮ ಸಮುದಾಯದ ನೈಜ ಬದುಕು ಮತ್ತು ಅವರ ಸಂಬಂಧಗಳನ್ನು ಕಥೆಗಳ ರೂಪದಲ್ಲಿ ಕವನದಲ್ಲಿ ಬರೆಯಲು ಪ್ರಾರಂಭಿಸಿದ್ದಾರೆ.

ಕಾವ್ಯದಲ್ಲಿ ತತ್ ಕ್ಷಣದ ಪರಿಹಾರ ಮತ್ತು ದಿಢೀರಣೆ ಬದಲಾವಣೆ ಕಾಣಬಹುದು ಎಂಬುದು ತಿಳಿದ ದಲಿತ ಕವಿಗಳು ತಮ್ಮನ್ನು ಕಾವ್ಯದ ವಿಶಿಷ್ಟ ಸಾಂಸ್ಕೃತಿಕ ಲೋಕದಲ್ಲಿ ಶಿಷ್ಟ ಲೋಕಕ್ಕೆ ಸವಾಲೆಸೆಯುವ ಪಂಥಿಯಲ್ಲಿ ಬರೆಯತೊಡಗಿದರು. ಅಕ್ಷರವನ್ನೆ ಕಾಣದೇ ಇದ್ದ ಜನರು ಮತ್ತು ಅವರ ಕೇರಿಗಳು ಅವರ ಅನುಭವಗಳು, ಹೋರಾಟ ವರ್ಗ ವರ್ಣದ ವಿರುದ್ದ ಜಗಳ-ಸಹಾಯಕತೆ, ಶೋಚಣೆಗಳ ಮೂಲಕ ಅಕ್ಷರಗಳಲ್ಲೆ ಪ್ರವೇಶಿಸಿ, ಅಶ್ವರ್ಯವನ್ನು, ಭಯವನ್ನು ಮೂಡಿಸಿದ ಸಾಹಸ ಫಲಪ್ರದವಾಗಿ ಕವಿತೆಗಳ ಮೂಲಕ ಶ್ರೋತೃಗಳನ್ನು ಅವರ ಮೆಚ್ಚುಗೆಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ಧಾರೆ. ಹೀಗೆ ದಲಿತ ಕಾವ್ಯ ತನ್ನದೇಯಾದ ಇತಿಹಾಸ ಮತ್ತು ಧೋರಣೆಯನ್ನು ಒಳಗೊಂಡಿದ್ದು ಈ ನಿಟ್ಟಿನಲ್ಲಿ ದಲಿತ ಕಾವ್ಯ ಬೆಳೆಯುತ್ತಾ ಬರುತ್ತಿದೆ.

**ಅಡಿ ಟಿಪ್ಪಣಿಗಳು**

**೧. ಕನ್ನಡ ದಲಿತ: ಸಮಾಲೋಚನೆ**

**ಸಂಪಾದಕರು-ಡಾ.ಅರ್ಜುನ ಗೊಳಸಂಗಿ. ಪುಟ - ೧೨೩**

**೨. ದಲಿತ ಸಾಹಿತ್ಯ- ನೆಲೆ ಹಿನ್ನೆಲೆ: ಡಾ.ಅರವಿಂದ ಮಾಲಗತ್ತಿ. ಪುಟ - ೨೧**

**೩. ಅದೇ ಪುಟ -೨೪**

ಹೊಸತಲೆಮಾರಿನ ದಲಿತ ಬರಹಗಾರರಲ್ಲಿ ಮೂಡ್ನಾಕೂಡು ಚಿನ್ನಸ್ವಾಮಿ ಒಬ್ಬರಾಗಿದ್ದು ಇವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಬಹಳ ವಿಶಿಷ್ಟವಾದದ್ದು. ಚಿನ್ನಸ್ವಾಮಿಯವರು ಚಾಮರಾಜನಗರ ಜಿಲ್ಲೆಯ ಮೂಡ್ನಾಕೂಡು ಎಂಬ ಗ್ರಾಮದಲ್ಲಿ ೨೨-೯-೧೯೫೪ ರಂದು ಜನಿಸಿದರು. ತಂದೆ ಬಿ.ಬಸವರಾಜಯ್ಯ ತಾಯಿ ಗೌರಮ್ಮ ಇವರ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ನಡೆದದ್ದು ದೊಡ್ಡರಾಯಪೇಟೆ, ಮೂಡ್ನಾಕೂಡು, ಚಾಮರಾಜನಗರ, ಮೈಸೂರು ಧಾರವಾಡಗಳಲ್ಲಿ. ಇವರು ಪಡೆದ ಪದವಿ ಎಂ.ಕಾಂ, ಎಂ.ಎ (ಕನ್ನಡ) ಡಿ.ಲಿಟ್, ಕರ್ನಾಟಕ ರಾಜ್ಯ ರಸ್ತೆ ನಿಗಮದಲ್ಲಿ ಮುಖ್ಯ ಲೆಕ್ಕಾಧಿಕಾರಿ ಹಾಗೂ ಆರ್ಥಿಕ ಸಲಹಾಧಿಕಾರಿಗಳಾಗಿ ಮೈಸೂರು, ಹಾಸನ, ಹುಬ್ಬಳ್ಳಿ, ಗದಗ, ಗುಲ್ಬರ್ಗಾಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಪ್ರಸ್ತುತ ಬೆಂಗಳೂರಿನಲ್ಲಿ ಇವರ ವಾಸ.

**ಚಿನ್ನಸ್ವಾಮಿಯವರು ಬರೆದ ಕವನ ಸಂಕಲನಗಳು**

ಕೊಂಡಿಗಳು ಮತ್ತು ಮುಳ್ಳು ಬೇಲಿಗಳು (೧೯೮೯)

ಗೋಧೂಳಿ (೧೯೯೩)

ನಾನೊಂದು ಮರವಾಗಿದ್ದರೆ (೧೯೯೮)

ಚಪ್ಪಲಿ ಮತ್ತು ನಾನು (೧೨೦೧)

ಕನಕಾಂಬರಿ (೨೦೦೩)

ಮೊದಲ ಎರಡು ಕವನ ಸಂಕಲನಗಳನ್ನು ಪುನರ್ ಮುದ್ರಿಸಿ 'ಮತ್ತೆ ಮಳೆ ಬರುವ ಮುನ್ನ' ಎಂಬ ಶೀರ್ಷಿಕೆಯಡಿ ೨೦೦ನೇ ಇಸವಿಯಲ್ಲಿ ಹೊರತಂದರು. ಆದರೆ ಇನ್ನುಳಿದ ಎಲ್ಲ ಸಂಕಲನಗಳನ್ನು ೨೦೦೫ ನೇ ಇಸವಿಯಲ್ಲಿ 'ಚಂದಿರನ ಕಣ್ಣು ಇಂಗಲಾರದ ಹುಣ್ಣು' ಎಂಬ ಶೀರ್ಷಿಕೆಯಡಿ ನೀಡಿ ಪುನರ್ ಮುದ್ರಿಸಲಾಯಿತು. ಇವರ ಕವಿತೆಗಳು ಹಿಂದಿ, ಇಂಗ್ಲೀಷ್ ಹಾಗೂ ಸ್ಪ್ಯಾನೀಷ್ ಭಾಷೆಗಳಿಗೆ ಅನುವಾದಗೊಂಡಿವೆ. ಅಂಗಾರ್ ಚೋಟಿಪರ್ (೨೦೦೧) ಆಯ್ದ ಕವಿತೆಗಳನ್ನು ಹಿಂದಿಗೆ ಅನುವಾದ ಮಾಡಿದ್ದಾರೆ. 'ಮೋಹದ ದೀಪ' ಎಂಬ ೮ ಕಥೆಗಳುಳ್ಳ ಕಥಾ ಸಂಕಲನ ಬರೆದು ೧೯೯೯ ರಲ್ಲಿ ಪ್ರಕಟಿಸಿದ್ದಾರೆ. ಹಾಗೂ 'ದಲಿತ ಕಥೆಗಳು' ಎಂಬ ಕಥಾ ಸಂಕಲವನ್ನು ೧೯೯೬ ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ.

**ನಾಟಕಗಳು:**

ಕೆಂಡ ಮಂಡಲ – ೧೯೯೧

ಮೂರು ಬೀದಿ ನಾಟಕಗಳು – ೨೦೦೪

ಅಪಘಾತ ಮತ್ತು ಅಂಗಭಂಗ – ೨೦೦೧

ಬಹುರೂಪಿ (ಕಾವ್ಯ ನಾಟಕ) – ೨೦೦೮

**ಲೇಖನ:**

ನೊಂದವರ ನೋವು – ೨೦೦೨

ಮಾತು ಮಂಥನ – ೨೦೦೪

ಒಂದು ಕೊಡ ಹಾಲಿನ ಸಮರ – ೨೦೦೮

**ವ್ಯಕ್ತಿ ಚಿತ್ರ:**

ಭೀಮಾಬೋಯಿ – ೧೯೯೪

**ಅನುವಾದ:**

ಯುವ ಬೌದ್ಧರಿಗೊಂದು ದರ್ಶನ ೧೯೯೪

**ಪುರಸ್ಕಾರಗಳು:**

ವಿಶ್ವ ಗ್ರಾಮದ ಪರಿಕಲ್ಪನೆಯ ಹಿನ್ನೆಲೆಯಲ್ಲಿ 'ಭಾರತದ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಯ ಸ್ವರೂಪ' ಎಂಬ ಮಹಾ ಪ್ರಬಂಧಕ್ಕೆ ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಡಿ.ಲಿಟ್ ಪದವಿ ಬಂದಿದೆ. ೧೯೯ ರಲ್ಲಿ ಟೊರಾಂಟೊ ಕನ್ನಡ ಸಂಘ ಕೆನಡಾ ಇವರಿಂದ ಪುರಸ್ಕಾರ, ವಾರಂಬಳ್ಳಿ ಕಾವ್ಯ ಪ್ರಶಸ್ತಿ–೧೯೯೪, ಮೃತ್ಯುಂಜಯ ಸಾರಂಗ ಮಠ ಕಾವ್ಯ ಪ್ರಶಸ್ತಿ–೨೦೦೦, ಬೇಂದ್ರೆ ಪ್ರಶಸ್ತಿ–೨೦೦೧ ೨೦೧೪ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮದೇ ಆದ ಸಾಹಿತ್ಯ ಕೃಷಿಮಾಡಿ ಇಂದಿಗೂ ಕೂಡ ಅವರ ಸಾಹಿತ್ಯ ಚಟುವಟಿಕೆ ಮುಂದುವರೆಯುತ್ತಾ ಬರುತ್ತಿರುವುದನ್ನು ಸಹೃದಯರಾದ ನಾವು ಕಾಣಬಹುದಾಗಿದೆ.

## ಅಧ್ಯಾಯ ೩

# ಮೂಡ್ನಾಕೂಡು ಚಿನ್ನಸ್ವಾಮಿಯವರ ಕಾವ್ಯಗಳಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ ಹಾಗೂ ಅಭಿವ್ಯಕ್ತಿ ನೆಲೆಗಳು



### ೧. ದಲಿತತ್ವದ ನೋವಿನ ನೆಲೆಗಳು:

ಮೂಡ್ನಾಕೂಡು ಚಿನ್ನಸ್ವಾಮಿಯವರು ಕನ್ನಡದ ಹಲವು ದಲಿತ ಕವಿಗಳಲ್ಲಿ ಒಬ್ಬರಾಗಿದ್ದು, ಇವರ ಬಹುತೇಕ ಕವಿತೆಗಳಲ್ಲಿ ದಲಿತತ್ವದ ನೋವು ಅಪಾರವಾಗಿ ವ್ಯಕ್ತಗೊಂಡಿದೆ. ಆ ಕವಿತೆಗಳನ್ನು ಈ ಕೆಳಗಿನಂತೆ ಉದಾಹರಿಸಬಹುದಾಗಿದೆ. 'ಕೊಂಡಿಗಳು ಮತ್ತು ಮುಳ್ಳುಬೇಲಿಗಳು' ಎಂಬ ಕವಿತೆಯಲ್ಲಿ ದಲಿತತ್ವದ ಬಗೆಗಿನ ನೋವು ದಟ್ಟವಾಗಿ ಕಂಡುಬರುತ್ತದೆ.

ನಮ್ಮೆಲ್ಲರನ್ನೂ

ಒಟ್ಟಾಗಿ ಹಿಡಿದಿಟ್ಟ

ನೆಲ

ಏಕ ಕಾಲಕ್ಕೆ ಆವರಿಸಿಕೊಳ್ಳುವ

ಬೆಳಕಿನ ಬಲೆ –

ಗಳಲ್ಲಿ ನಾವು

ಬಂದಿಗಳು[೧]

ಈ ಪದ್ಯದಲ್ಲಿ ನೆಲ, ಬೆಳಕು, ಗಾಳಿಗಳನ್ನು ಹಂಚಿಕೊಳ್ಳುವ ಮನುಷ್ಯರ ಸಂಬಂಧಗಳು ನಿಸರ್ಗದತ್ತವಾಗಿದ್ದರೂ ನಾವು ನಮ್ಮ ನಡುವೆ ಬೇಲಿಗಳನ್ನು ಕಟ್ಟಿಕೊಂಡು ಈ ಸಂಬಂಧಗಳನ್ನು ನಾಶ ಮಾಡುತ್ತಿರುವುದು ದಲಿತರ ದುಃಖಕ್ಕೆ ಕಾರಣವಾಗಿದೆ.[೨]

ಒಂದೇ ಗಾಳಿಯನ್ನು

ಎಳೆದೆಳೆದು

ಕುಡಿದು

ಬದುಕುವ ಕೊಂಡಿಗಳು

ಆದರೂ

ಅಮರಿಕೊಳ್ಳಬೇಕಾದ

ಕೊಂಡಿಗಳು

ಕಳಚಿಕೊಂಡವು

ಬೆಳೆಕೊಂಡವು

ನಮ್ಮೊಳಗೆ ನಡುನಡುವೆ

ಸುತ್ತಲೂ

ಮುಳ್ಳು ಬೇಲಿಗಳು

– ಕೊಂಡಿಗಳು ಮತ್ತು ಮುಳ್ಳುಬೇಲಿಗಳು

ಭೂಮಿಯ ಮೇಲೆ ವಾಸಿಸುವ ಮನುಷ್ಯರೆಲ್ಲರನ್ನು ಗಾಳಿ, ಬೆಳಕು, ಕತ್ತಲೂ ಆಕಾಶಗಳು ಕೊಂಡಿಗಳಂತೆ ಬಂಧಿಸಿವೆ. ಎಲ್ಲರೂ ಒಂದೇ ಎಂಬ ಭಾವನೆ ಅವುಗಳಿಗಿದೆ. ಆದರೆ ಮನುಷ್ಯನು ಈ ಕೊಂಡಿಗಳನ್ನು ಬೇರ್ಪಡಿಸಿ ಜಾತಿ ಎಂಬ ಮುಳ್ಳು ಬೇಲಿಗಳನ್ನು ಸೃಷ್ಟಿಸಿದ್ದಾರೆಂಬುದನ್ನು ಕವಿ ಮಾರ್ಮಿಕವಾಗಿ ಧ್ವನಿಸುವ ಪ್ರಯತ್ನವನ್ನು ಮಾಡಿದ್ದಾರೆಂದು ಅನಿಸುತ್ತದೆ. ಈ ಕವಿತೆಯಲ್ಲಿ ಜಾತಿ ಎಂಬುದು ಮನುಷ್ಯ ಮನುಷ್ಯನ ಮಧ್ಯೆ ಮುಳ್ಳು ಬೇಲಿಗಳನ್ನು ಸೃಷ್ಟಿಸಿರುವ ಬಗೆಯನ್ನು ಅನಾವರಣಗೊಳಿಸುವ ಪ್ರಯತ್ನ ಮಾಡಲಾಗಿದೆ. ಜನಾಂಗವನ್ನು ಶೋಷಿಸಿದ, ದಯನೀಯವಾಗಿ ತುಳಿದ ಶಕ್ತಿಗಳನ್ನು ಮುಳ್ಳುಬೇಲಿಗಳೆಂದು ಹೀಯಾಳಿಸುತ್ತಾ ಆ ಬೇಲಿಯಲ್ಲೇ ತಮ್ಮತನವನ್ನು ಹುಡುಕುತ್ತಾ ಆ ಬಂಧನದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಈ ವಿವೇಚನೆ ಕೇವಲ ಆದರ್ಶವಾಗುವ ನೆಲೆಯನ್ನು ಆಧುನಿಕ ದಲಿತರು ದಾರಿ ತಪ್ಪಿಸುವ ಕವಲುತನದಲ್ಲಿ ಗಮನಿಸಬಹುದು.

ಹೀಗೆ ಕವಿಯು ತಮ್ಮ ಜನಾಂಗದ ಸ್ಮೃತಿಯ ಮೇಲೆ ತೀವ್ರ ಸಂವೇದನೆಯಿಂದ ಬರೆದ ಕವಿತೆ ಇದಾಗಿದೆ. ಆದ್ದರಿಂದ ಈ ಸಂಕಲನದ ಪ್ರಸ್ತಾವನೆಯಲ್ಲಿ ನಾನು ಕ್ರಾಂತಿ ಮಾಡಬಯಸುವ ಕನಸುಗಣ್ಣಿನ ಕವಿಯಲ್ಲ. ಒಂದೇ ದಿನದಲ್ಲಿ ಒಂದು ತಿಂಗಳಿನಲ್ಲಿ Meta morphosis ಆಗಬಹುದೆಂಬ ಭ್ರಮೆಯೂ ನನ್ನಲ್ಲಿಲ್ಲ. ಇಲ್ಲಿ ಪಡಿಮೂಡಿರುವ ಕವನಗಳ ಒಂದೊಂದು ಸಾಲು, ನಾನುಂಡ ನೋವು, ನನ್ನೆದೆಯ ಅಳಲು ನನ್ನ ವೈಚಾರಿಕ ಮನದ ಗೋಳು ಎಂದು ಕವಿ ಹೇಳಿದ್ದಾರೆ.

ಚಿನ್ನಸ್ವಾಮಿಯವರ ಮತ್ತೊಂದು ಕವನ ಸಂಕಲನ 'ನಾನು ಮತ್ತು ಚಪ್ಪಲಿ' ಇದರಲ್ಲೂ ದಲಿತತ್ವದ ನೋವು ಅಡಗಿರುವುದನ್ನು ಕಾಣಬಹುದು.

'ಚಪ್ಪಲಿ ಮತ್ತು ನಾನು' ಎಂಬ ಕವಿತೆಯಲ್ಲಿ ಪಾದರಕ್ಷೆಯ ಪ್ರತಿಮೆಯಿಂದ ಪ್ರಾರಂಭವಾಗುವ ಪದ್ಯ ದೇವಾಲಯದ ದೇವರ ವಿಗ್ರಹದವರೆಗೆ ವ್ಯಾಪಿಸುತ್ತಾ ಗರ್ಭಗುಡಿ ಮತ್ತು ಗರುಡಗಂಭದ ನಡುವೆ ಜೀವತಂತುವೊಂದನ್ನು ನಿರ್ಮಿಸುತ್ತದೆ. ದೇವಾಲಯದ ಒಳಗೆ ಹೋಗಬಹುದಾದವರ ಮನಸ್ಸು ಒಳಗೆ ಹೋಗಲಾರದ ನಿಷಿದ್ದಗೊಂಡ ವ್ಯಕ್ತಿಯ ಪೂಜೆಯ ಕ್ರಮ ಇದನ್ನೆಲ್ಲ ಒಂದು ವ್ಯಂಗ್ಯದ ಮೂಲಕ ಕವಿ ವಿಶ್ಲೇಷಿಸಿದ್ದಾರೆ.[೩]

ನಾನು ದೇವಸ್ಥಾನಕ್ಕೆ ಹೋದಾಗ
ಚಪ್ಪಲಿಯನ್ನು ಹೊರಗೆ ಬಿಡುವುದಿಲ್ಲ
ನಾನೇ ಹೊರಗಿರುತ್ತೇನೆ.
ಚಮ್ಮಾರನ ಕಾಲುಗಳಲ್ಲಿ ಕಂಡ ಚಪ್ಪಲಿ
ಮನುಷ್ಯ ನಾಯಿಯನ್ನು ಕಚ್ಚಿದಾಗ ಆಗುವಂತೆ
ಸುದ್ದಿಯಾಗುತ್ತದೆ.

– ಚಪ್ಪಲಿ ಮತ್ತು ನಾನು

ಅಸ್ಪೃಶ್ಯರ ದೇವಾಲಯ ಪ್ರವೇಶವೇ ಆಧುನಿಕ ಭಾರತದ ಮೊದಲ ಪ್ರತಿಭಟನೆಯೆಂಬುದನ್ನು ನಾವು ಬಲ್ಲೆವು ಆ ಘಟ್ಟಮುಗಿದು ಈಗ ದೇವಾಲಯದ ಗೊಡವೆಯೇ ಬೇಡವೆಂಬ ಧ್ಯಾನದ ಘಟ್ಟಕ್ಕೆ ಬಂದ ಸಂದರ್ಭದಲ್ಲಿ ಕವಿಯ ಮನಸ್ಸು ಮತ್ತೆ ದೇವಾಲಯದ ಸಮೀಪ ಸುಳಿಯತೊಡಗಿದೆ. ದೇವಾಲಯವೆಂಬ ಸಂಕೀರ್ಣ ರೂಪಕವನ್ನು ಇಲ್ಲಿ ಹಲವು ಸ್ವರಗಳಲ್ಲಿ ಬಳಸಲಾಗಿದೆ. ಗರ್ಭಗುಡಿಯಲ್ಲಿರುವ ಮಂದಿ ತಮ್ಮ ಚಪ್ಪಲಿಗಳ ಮೇಲೆ ನಿಗಾ ಇಡುತ್ತಾರೆ. ಅವರಿಗೆ ಏಕಾಗ್ರತೆ ಸಾಲದು ಎಂದಷ್ಟೇ ಹೇಳಿದರೆ ಪದ್ಯ ಈಗಿರುವ ಆಯಾಮವನ್ನು ಪಡೆದುಕೊಳ್ಳುತ್ತಿರಲಿಲ್ಲ. ಕವಿತೆಯ ನಾಯಕನ ಮನಸ್ಸಿನ ಒಳತೋಟಿಯನ್ನು ದಟ್ಟವಾಗಿ ಬಿಂಬಿಸಿರುವುದರಿಂದ ಪಾರಂಪರಿಕವೂ ಪರಿಚಿತವೂ ಆದ ಸಂಕೇತಕ್ಕೆ ನವೀನ ರೀತಿಯ ಹೊಳಪು ಬಂದಿದೆ.

ಚಪ್ಪಲಿಗಳನ್ನು ಬಿಚ್ಚಿ ಹರಡುವ
ಎಲ್ಲರ ಕಾಲುಗಳು
ನನ್ನ ಮೇಲೆ ಹರಿದಾಡುತ್ತವೆ[೪]

ಇಲ್ಲಿ ಕವಿ ಚಮ್ಮಾರನ ಆರ್ಥಿಕ ಸ್ಥಿತಿಯನ್ನು ಕುರಿತು ಹೇಳುತ್ತಿದ್ದಾರೆ. ಎಂದು ನಮಗೆ ಮೇಲೂ ನೋಟಕ್ಕೆ ಕಂಡರೂ ಈ ಸಾಲುಗಳ ಅಂತರಾಳದಲ್ಲಿ ಚಮ್ಮಾರ ಮತ್ತು ದೇವರಿಗೆ ಇರುವ ಅಂತರವನ್ನು ಕುರಿತು ಮಾತನಾಡುತ್ತಿದ್ದಾರೆ ಎಂಬ ಊಹೆ ನಮಗೆ ಆಗುತ್ತದೆ. ಆದರೆ ವಚನ ಸಾಹಿತ್ಯದಲ್ಲಿ ಯಾವುದೇ ಜಾತಿ, ವರ್ಗ ಎಣಿಸದೆ ದೇವಾಲಯದ ಹೊರಗೆ ಇದ್ದು ಅಂತರಾಳದಲ್ಲಿ ದೇವರನ್ನು ಕಾಣುವ ಕಾರ್ಯ ಅಂದು ಸಾಮಾನ್ಯವಾಗಿತ್ತು.

ಚಪ್ಪಲಿಗಳನ್ನು ಬಿಚ್ಚಿ ಹರಡುವ ಎಲ್ಲರ ಕಾಲುಗಳು ನನ್ನ ಮೇಲೆ ಹರಿದಾಡುತ್ತದೆ ಎಂಬ ಮಾತಿನಲ್ಲಿ ಮೇಲ್ಜಾತಿಯವರ ಕ್ರೌರ್ಯ, ದರ್ಪವನ್ನು ಪರೋಕ್ಷವಾಗಿ ಸೂಚಿಸುತ್ತದೆ.

ಸಮಾಜದ ಒಳಗೆ ಸದಾ ಮೇಲ್ಜಾತಿಯ ಜನರು ದಲಿತರನ್ನು ತುಳಿಯುತ್ತಾ ಬಂದಿದ್ದಾರೆ. ಅಲ್ಲದೆ ಅವರ ಮೆತ್ತನೆಯ ಕಾಲುಗಳಿಗೆ ಹಾಸಿಗೆಯಾಗುವ ದಲಿತರ ದಾರುಣ ಸ್ಥಿತಿಯು ಸಹೃದಯರ ಕಣ್ಣಲ್ಲಿ ನೀರನ್ನು ತರಿಸದೇ ಇರದು

ನಾನೊಂದು ಗಿಡ

ಅದು ನನ್ನ ಬುಡ

ಎಂದವರಿಗೆ ತಿಳಿಯುವುದೇ ಇಲ್ಲ.

ಚಮ್ಮಾರನ ಕಾಲಿನೊಳಗಿನ ಚಪ್ಪಲಿ ಅವನ ಬುಡ ಎಂದು ವರ್ಣಿತವಾಗಿರುವ ಈ ಸಾಲುಗಳು ಅತ್ಯಂತ ವಿಸ್ತಾರವಾದ ಅರ್ಥ ಸಾಧ್ಯತೆಯನ್ನು ಒಳಗೊಂಡಿದೆ. ಚಪ್ಪಲಿ ಕೇವಲ ಪಾದರಕ್ಷೆ ಮಾತ್ರವಲ್ಲ ಚಮ್ಮಾರನಿಗೆ ಅದು ಅವನ ಅಸ್ಥಿತ್ವದ ತಳಪಾಯ ಬೇರೆಯವರಿಗೆ ವಸ್ತು ಮಾತ್ರವಾಗಿರುವ ಚಪ್ಪಲಿಗಳೆಂಬುವು ಚಮ್ಮಾರನಿಗೆ ಜೀವಪೋಷಣೆಯ ಅಸ್ಥಿಭಾರವಾಗಿದೆ. ಕವಿತೆಯಲ್ಲಿ ಬರುವ 'ಅದು ನನ್ನ ಬುಡ' ಎಂಬ ಮಾತನ್ನು ಚಪ್ಪಲಿ ಹಾಕುವವ ಅದನ್ನು ಕೀಳಾಗಿ ಕಂಡರೆ ಚಪ್ಪಲಿ ತಯಾರಿಸಿದವನ ಕಲಾತ್ಮಕತೆಯನ್ನು ಹಾಗೂ ಅವನ ಸೃಜನಶೀಲ ಮನಸ್ಸು ಈತನಿಗೆ ಅರಿಯುವುದು ಸಾಧ್ಯವಿಲ್ಲ ಎಂಬ ಅರ್ಥವೂ ಇದ್ದಿರಬಹುದು.

ದೇವರ ಬಳಿ ಸುಳಿದು

ದಕ್ಷಿಣ ಪ್ರದಕ್ಷಿಣೆ ಹಾಕುವವರು

ರೆಪ್ಪೆ ಮುಚ್ಚದೆ ಆಗಾಗ ನನ್ನತ್ತ ನೋಡುವರು

ನನ್ನ ಚಿತ್ತ ಮಾತ್ರ ದೇವರತ್ತ.

ಗರ್ಭಗುಡಿಯಲ್ಲಿ

ಹೂವು ಗಂಧ ಪಡೆದುಕೊಳ್ಳುವವರ ಆತ್ಮ

ಕಳಚಿಟ್ಟ ಚಪ್ಪಲಿಗಳ ಬಳಿ

ಹೊರಗೆ[೫]

ಈ ಸಾಲುಗಳೂ ಡಾಂಭಿಕ ಭಕ್ತರ ಬಣ್ಣವನ್ನು ಬಯಲು ಮಾಡುತ್ತವೆ. ವಾಸ್ತವ-ವ್ಯಂಗ್ಯಗಳ ಅಪೂರ್ವ ಸಾಮರಸ್ಯ ಇಲ್ಲದೆ ಹೀಗೆ ಅರ್ಥಪೂರ್ಣವಾಗಿ ಅಭಿವ್ಯಕ್ತಿಸುತ್ತಾನೆ.

ನಿತ್ಯ ಹಜಾರದಲ್ಲಿ ನಿಂತು

ಗೋಣ ಆನಿಸಿ ಇಣುಕಿ

ಪುನೀತವಾಗುವ ನನ್ನ ಆತ್ಮ

ದೇವರ ಬಳಿ ಒಳಗೆ

ಈ ಸಾಲುಗಳಲ್ಲಿ ಜನರ ಏಕಾಗ್ರತೆಯನ್ನು ಟೀಕಿಸುತ್ತಾ ಅವರ ಮನಸ್ಸು ಎಷ್ಟು ಕೀಳು ಎಂಬುದನ್ನು ಈ ಮೇಲಿನ ಸಾಲುಗಳಲ್ಲಿ ಹೇಳುತ್ತಿದ್ದಾರೆ. ಕೊನೆಗೆ ಕವಿ ದೇವಸ್ಥಾನದಲ್ಲಿರುವ ದೇವರ ಆತ್ಮದಲ್ಲಿ ನಾನು ನೆಲೆಯೂರಿದ್ದೇನೆ ಎಂದು ಹೇಳುವುದು ಕವಿಯ ಅಸ್ಪೃಶ್ಯತೆಯ ಬಗೆಗಿನ ನೋವು ಮನದಟ್ಟಾಗುತ್ತದೆ. ಹೀಗೆ ಕವಿಯ ನೈಜವಾದ ಮತ್ತು ಪ್ರಬುದ್ದವಾದ ಕಾವ್ಯ ಪ್ರತಿಭೆ 'ಚಪ್ಪಲಿ ಮತ್ತು ನಾನು' ಎಂಬ ಕವನದಲ್ಲಿ ಅಭಿವ್ಯಕ್ತಗೊಂಡಿದೆ.

ಅದೇ ರೀತಿಯಾಗಿ ಚಿನ್ನಸ್ವಾಮಿಯವರ 'ನಾನೊಂದು ಮರವಾಗಿದ್ದರೆ' ಎಂಬ ಕವಿತೆಯಲ್ಲಿಯೂ ಸಹ ದಲಿತತ್ವದ ನೋವು ಅಡಕವಾಗಿರುವುದನ್ನು ಕಾಣಬಹುದು. ಈ ಕವಿತೆ 'ನಾನೊಂದು ಮರವಾಗಿದ್ದರೆ' ಎಂಬ ಸಂಕಲನದ ಪ್ರಧಾನ ಹಾಗೂ ಪ್ರಾತಿನಿಧಿಕ ಕವಿಯಾಗಿದ್ದು ಈ ನೆಲದ ಕುಲಮೂಲ ಚಿಂತನಾ ಕ್ರಮವನ್ನು ಅದು ಹುಟ್ಟಿಸಿದ ಸಂಕಟ ಹಾಗೂ ಅಸಹಾಯಕತೆಯನ್ನು ಪ್ರಕೃತಿಯ ಪರಿಭಾಷೆಯಲ್ಲಿ ತಲುಪಿಸುವ ಯತ್ನ ಇಲ್ಲಿದೆ.

ನಾನೊಂದು ಮರವಾಗಿದ್ದರೆ

ಹಕ್ಕಿ ಗೂಡು ಕಟ್ಟುವ ಮುನ್ನ

ಕೇಳುತ್ತಿರಲಿಲ್ಲ ನೀನು ಯಾವ ಕುಲ

ಬಿಸಿಲು ನನ್ನ ಅಪ್ಪಿಕೊಂಡಾಗ

ನೆರಳಿಗಾಗುತ್ತಿರಲಿಲ್ಲ ಮೈಲಿಗೆ

ತಂಬೆಲರ ಕೂಡ ಎಲೆಗಳ ಸ್ನೇಹ

ಮಧುರವಾಗಿರುತ್ತಿತ್ತು.[೬]

– ನಾನೊಂದು ಮರವಾಗಿದ್ದರೆ

ಈ ಕವನದ ಆರಂಭದಲ್ಲಿ 'ನಾನು' ಎಂಬ ಸರ್ವನಾಮ ಬಳಸಿದ್ದು ಕವಿಯ ವೈಯಕ್ತಿಕ ಮತ್ತು ಇಡೀ ಶೋಷಿತ ಸಮುದಾಯದ ಪ್ರತಿನಿಧಿಯಾಗಿಯೂ ಕಾಣುತ್ತದೆ. ಕವಿಯು ಈ ಕವನದಲ್ಲಿ ರೂಪಕವನ್ನು ಬಳಸಿ ಆ ಮೂಲಕ ತಮಗಾದ ನೋವನ್ನು ತಿಳಿಸಿದ್ದಾರೆ. ಒಂದು ಪಕ್ಷ ನಾನು ಮರವಾಗಿದ್ದರೆ? ಹೇಗಿರುತ್ತಿದೆ ಎಂಬುದನ್ನು ಹೇಳುತ್ತಾರೆ. ಮನುಷ್ಯರಾಗಿ ಹುಟ್ಟಿದ ಮೇಲೆ ಏನೆಲ್ಲ ತಾರತಮ್ಯ ಮಾಡುತ್ತೇವೆ ಅದೇ ಒಂದು ಮರವಾಗಿದ್ದರೆ? ಯಾರಿಂದಲೂ ಭೇದ-ಭಾವವನ್ನು ತೋರದೆ ಇರುತ್ತವೆ. ಈ ಗುಣ ಸಹ ಮಾನವರಲ್ಲಿ ಏಕೆ ಇಲ್ಲ ಎಂಬುದು ಕವಿಯ ಪ್ರಶ್ನೆಯಾಗಿದೆ.

'ಹಕ್ಕಿಗೂಡು ಕಟ್ಟುವ ಮುನ್ನ ಕೇಳುತ್ತಿರಲಿಲ್ಲ ನೀನು ಯಾವ ಕುಲ' ಎಂಬ ಸಾಲುಗಳಲ್ಲಿ ಸಮಾಜದಲ್ಲಿನ ಮೇಲು-ಕೀಳಿನ ತಾರತಮ್ಯವನ್ನು ಪ್ರತಿಬಿಂಬಿಸುತ್ತದೆ. ಅದರಂತೆ ಕಾವ್ಯದಾಳದಲ್ಲಿ 'ನಿಸರ್ಗಮುಖಿ' ಮಾನವೀಯ ಪ್ರೇಮದ ಬೆಳವಣಿಗೆಗೆ ಹಂಬಲಿಸಿದ್ದಾರೆ. ಅಲ್ಲದೆ ಇರುವುದೊಂದೇ ನೆಲ, ಇಲ್ಲ ಬಿಸಿಲು, ಗಾಳಿ, ಮಳೆ ಎಲ್ಲವೂ ಯಾವುದೇ ತಾರತಮ್ಯ ತೋರದೆಯಿದ್ದು ಮನುಷ್ಯರನ್ನು ಮುಟ್ಟುವಾಗ ಮನುಜರಲ್ಲ ಈ ಭೇದ-ಭಾವ ಏಕೆ? ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ ಇದು ಕಾವ್ಯದ ಒಳಧ್ವನಿ.

ಕೆಳವರ್ಗದ ಶ್ರಮಜೀವಿಗಳನ್ನು ಮುಟ್ಟಿಸಿಕೊಳ್ಳಲಾರದವರು ಅವರ ನೆರಳು ತಮ್ಮ ಮೇಲೆ ಬಿದ್ದರೆ ಮೈಲಿಗೆಯಾಗುತ್ತದೆಂಬ ಭಾವಗಳು ಹಿಂದೆ ಇತ್ತು ಆದರೆ ಇಂದು ಅದು ಕೊಂಚ ಬದಲಾವಣೆಯಾಗಿದೆ. ಅದನ್ನ ಕವಿಯು ಬಿಸಿಲು ನನ್ನ ಅಪ್ಪಿಕೊಂಡಾಗ ನೆರಳಿಗಾಗುತ್ತಿರಲಿಲ್ಲ ಮೈಲಿಗೆ ಎಂದಿದ್ದಾರೆ. ಅಲ್ಲದೇ ಹೊಸ ಚಿಗುರು ಮತ್ತು ಎಲೆಗಳ ನಡುವೆ ಸ್ನೇಹ ಅವಿನಾಭಾವ ಸ್ನೇಹ ಸಂಬಂಧವು ಹೇಗಿರುತ್ತಿತ್ತೆಂಬುದನ್ನು ತಿಳಿಸಿದ್ದಾರೆ. ಆ ಮೂಲಕ ಮಾನವ ಪ್ರೇಮ ಹೇಗಿರಬೇಕೆಂಬುದನ್ನು ತಿಳಿಸಲು ಹೊರಟಿದ್ದಾರೆ.

ಮಳೆ ಹನಿಗಳು ನಾನು ಶ್ವಪಚನೆಂದು

ಹಿಂದೆ ಸರಿಯುತ್ತಿರಲಿಲ್ಲ. ನಾನು

ಬೇರೂರಿ ಕುಡಿಯಿಡುತ್ತಿರುವಾಗ ಭೂ ದೇವಿ

ಮಡಿ ಮಡಿ ಎಂದು ಓಡುತ್ತಿರಲಿಲ್ಲ

ಪವಿತ್ರ ಗೋವು ನನ್ನ ತೊಗಟೆಗೆ ನನ್ನ ಮೈಯುಜ್ಜಿ

ತುರಿಕೆ ತೀರಿಸಿಕೊಳ್ಳವಾಗ ಅದರ ಅಂಗಾಂಗಳಲ್ಲಿ ಅಡರಿಕೊಂಡ

ಮುಕ್ಕೋಟಿ ದೇವತೆಗಳು ನನ್ನನ್ನು ಮುಟ್ಟಿಸಿಕೊಳ್ಳುತ್ತಿದ್ದರು.[೭]

ಮಳೆ ಹನಿಯು ನೀನು ಕೊಳಕು ನಿನ್ನನ್ನು ನಾ ಮುಟ್ಟುವುದಿಲ್ಲ ಎಂದು ಹಿಂದೆ ಸರಿಯುತ್ತಿರಲಿಲ್ಲ (ಮರವಾಗಿದ್ದರೆ) ಒಂದು ಬೀಜವು ಭೂದೇವಿಯ ಗರ್ಭ ಸೇರಿ ಮೊಳೆತು ಕುಡಿಯೊಡೆಯುವಾಗ ಮಡಿ ಮಡಿ ನನ್ನ ಮುಟ್ಟದಿರು ಎಂದು ಓಡುತ್ತಿರಲಿಲ್ಲ ಎಂಬಲ್ಲಿ ಅಸ್ಪೃಶ್ಯತೆಯ ಕರಾಳ ಮುಖ ದರ್ಶನವಾಗುತ್ತದೆ. ಗೋವನ್ನು ನಾವು ಪೂಜಿಸುತ್ತೇವೆ ಏಕೆಂದರೆ ಅದು ದೇವರ ಪ್ರತಿರೂಪ ಅಥವಾ ದೇವರು ಅದರಲ್ಲಿ ನೆಲೆಗೊಂಡಿದೆ ಎಂಬ ನಂಬಿಕೆ ಇದೆ.

ಜಗತ್ತನ್ನು ಮುಟ್ಟಿಸಿಕೊಳ್ಳುವ ತವಕದಲ್ಲಿರುವ ಒಂದು ಜನಾಂಗ ಹೇಗೆ ಹಂಬಲಿಸುತ್ತಿದೆ ಎಂದರೆ, ಮುಕ್ಕೋಟಿ ದೇವತೆಗಳು ವಾಸ ಮಾಡುವ ಒಂದು ಹಸು ಮರದ ತೊಗಟೆಗೆ ಉಜ್ಜಿಕೊಳ್ಳುವಾಗ ಇಡೀ ದೇವಾನುದೇವತೆಗಳು ಮುಟ್ಟಿಸಿಕೊಂಡ ಆನಂದವಿರುತ್ತದೆ ಎನ್ನುವ 'ಸ್ಪರ್ಶ' ದ ಕಲ್ಪನೆಯನ್ನು ಕವಿ ಮನುಷ್ಯನ ಮನಸ್ಸಿಗೆ ತುರಿಕೆಗೆ ಹೋಲಿಸಿ ಹೇಳಿದಂತಿದೆ. ಇದು ವಾಸ್ತವದಲ್ಲಿ ಮೇಲ್ಜಾತಿ ಎಂಬ ಮಿದುಳಿಗೆ ಅರಿವಾಗಬೇಕು ಎನ್ನುವುದನ್ನು ಪರೋಕ್ಷವಾಗಿ ಮುಟ್ಟಿಸುವಂತಿದೆ.

ಯಾರಿಗೆ ಗೊತ್ತು

ನನ್ನ ಅಂತ್ಯಕಾಲದಲ್ಲಿ ಒಣಸೀಳೊಂದು

ಹೋಮಾಗ್ನಿಯಲ್ಲಿ ಬೆಂದಿ

ಪಾವನವಾಗುತ್ತಿತ್ತೇನೊ.

– ನಾನೊಂದು ಮರವಾಗಿದ್ದರೆ

ಹೀಗೆ ಹೊರಳಿಸಿದ್ದು, ಕವಿಗೆ ಏನು ಹೇಳಬೇಕಿದೆ ಎಂಬುದು ಸ್ಪಷ್ಟವಾಗಿಲ್ಲದಿರುವುದನ್ನು ಎತ್ತಿ ತೋರಿಸಿದ್ದಾರೆ. ಹಿಂದೂ ಸಂಸ್ಕೃತಿಯ ಧ್ಯೋತಕವಾದ 'ಹೋಮಾಗ್ನಿಯ' ಕುರಿತು ಕವಿಗೆ ಗೌರವವೋ ಅಥವಾ ವ್ಯಂಗ್ಯದುದ್ದೇಶವೊ

ಗೊತ್ತಾಗುವಂತಿಲ್ಲ. ಅದೇ ಸತ್ಪುರುಷನೊಬ್ಬನ ಹೆಣಕ್ಕೆ ಚಟ್ಟವಾಗಿ ನಾಲ್ಕು ಜನ ಸಜ್ಜನರ ಹೆಗಲೇರಬಹುದಿತ್ತೆ? ಎನ್ನುವಲ್ಲಿಯ ಪರೋಪಕಾರಾರ್ಥವಲ್ಲದೆ ಧನ್ಯತಾಭಾವದ ಆಶಯ ಮೆಚ್ಚುವಂಥದ್ದು.

ಚೆನ್ನಸ್ವಾಮಿಯವರು ತಾವು ಅನುಭವಿಸಿದ ನೋವು ತಮ್ಮ ಸಮುದಾಯವು ಅನುಭವಿಸಿದ ನೋವಿನ ಅರಿವನ್ನು ಮರದ ಮೂಲಕ ಸಹೃದಯರಿಗೆ ಮುಟ್ಟಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅಲ್ಲದೇ ಹೇಳುವುದನ್ನು ರೋಷ, ಅಬ್ಬರಗಳಿಲ್ಲದೆ ಸ್ವಾಮ್ಯ, ವ್ಯಂಗ್ಯಗಳ ಮೂಲಕ ವಿಡಂಬಿಸುತ್ತಾರೆ. ಇದಕ್ಕೆ ಕಾರಣ ಬುದ್ಧನ ಪ್ರಭಾವ, ಪ್ರೇರಣೆಗಳು ಗೋಚರಿಸುತ್ತವೆ. 'ಮರೆಯಾಗುತ್ತಿರುವ ಮಾನವ ಪ್ರೀತಿ ಮರುಕಗಳಿಸಲಿ' ಎಂಬುದೆ ಈ ಕವನದ ಮೂಲ ಆಶಯವಾಗಿದೆ ಬಹಳ ಮುಖ್ಯವಾಗಿ ಈ ಕವಿತೆಯಲ್ಲಿ ಜಾತಿಯ ಪೆಡಂಭೂತಕ್ಕೆ ಬಲಿಯಾಗುವ ಮನುಷ್ಯನಿಗಿಂತ ನಾನೊಂದು ಮರವಾಗಿದ್ದರೆ ಚೆನ್ನಾಗಿತ್ತು ಎಂಬ ಅಸಮಾಧಾನದ ಅಸಹನೀಯ ಭಾವನೆಯನ್ನು ಕವಿ ವ್ಯಕ್ತ ಪಡಿಸಿದ್ದಾರೆ. 'ಅಸ್ಪೃಶ್ಯರು' ಎಂಬ ಕವಿತೆಯಲ್ಲಿ ಅಸ್ಪೃಶ್ಯತೆಯ ಬಗೆಗಿರುವ ಹಾಗೂ ದಲಿತರ ಕೀಳರಿಮೆಯ ನುಡಿಗಳು ವ್ಯಕ್ತಗೊಂಡಿವೆ. ಉಚ್ಚ ಜಾತಿಗಳು ದೂಷಿಸುವಾಗ ನೊಂದುಕೊಳ್ಳುವ ಈ ಜನರು ತಮಗೆ ತಾವೇ ಅಂತರ್ಯದಲ್ಲಿ ವ್ಯಥೆ ಪಡುವಂಥದ್ದನ್ನು ಕಾಣಬಹುದಾಗಿದೆ. ಇಲ್ಲಿ ಅಸ್ಪೃಶ್ಯತೆಯ ಕರಾಳತೆಯನ್ನು ನೋಡಬಹುದು. ಕ್ರಿಯಾಶೀಲತೆ ಇಲ್ಲದಿರುವುದು, ಅಂಜಿಕೆಯಂಥ ಸ್ವಭಾವ ದಲಿತರ ಜೀವನದ ಉದ್ದಕ್ಕೂ ಇರುತ್ತದೆ. ಇದರಿಂದಾಗಿಯೇ

ನಿರ್ಲಿಪ್ತರಲ್ಲ ಸ್ಥಿತ ಪ್ರಜ್ಞರೂ ಅಲ್ಲ

ವಿಷಣ್ಣರು

ವ್ಯಸನಿಗಳು

– ಅಸ್ಪೃಶ್ಯರು

ಎಂದು ಕವಿಯು ಹೇಳುವ ಮಾತಿನಲ್ಲಿ ಅಸ್ಪೃಶ್ಯತೆಯ ಬಗೆಗಿನ ನೋವು ವ್ಯಕ್ತವಾಗಿದೆ ಎನಿಸುತ್ತದೆ. 'ಗಿರಿಜನರು' ಎಂಬ ಕವಿತೆಯು ಕಾಡಿನಲ್ಲಿರುವ ಗಿರಿಜನರ ಆಚಾರ-ವಿಚಾರ ಜೀವನ ಪದ್ಧತಿ ಮತ್ತು ಸಂಸ್ಕೃತಿಯನ್ನು ಕಟ್ಟಿಕೊಡುವ ಒಂದು ಉತ್ತಮ ಕವಿತೆಯಾಗಿದೆ. ಕವಿಯು 'ಗಿರಿಜನ' ಎಂಬ ಪದವನ್ನು ವಾಚ್ಯಾರ್ಥವಾಗಿ ಬಳಸಿದರೂ ಇಲ್ಲಿ ದಲಿತರು ಎಂಬುದು ಒಂದು ರೀತಿಯಾದ ಸೂಚ್ಯ ಅರ್ಥವು ಬರುವುದು ಕವಿತೆಯನ್ನು ಓದಿದಾಗ ಗೋಚರವಾಗುತ್ತದೆ. ಗಿರಿಜನರ ಕಷ್ಟದ ಸ್ಥಿತಿ ಬದಿರು ನೇಯುವ, ಜೀವನ ಕ್ರಮ ಮುಖ್ಯವಾಗಿ ಕಂಡು ಬಂದರೂ ಅವರನ್ನು ನಾಗರೀಕರು ಎಂದು ಕರೆಯದಿರುವುದೇ ಒಂದು ರೀತಿ ದುರಂತ ಎಂದು ಕವಿ ಈ ಕವಿತೆಯಲ್ಲಿ ವಿಷಾದ ವ್ಯಕ್ತಪಡಿಸುತ್ತಾರೆ. ದಲಿತರಿಗೆ ತಮ್ಮದೇಯಾದ ಇತಿಹಾಸವಿಲ್ಲ ಅವರು ಹೆತ್ತವರು ಹಿಡಿದ ತಪ್ಪು ಕಾಡಿನ ದಾರಿಯಲ್ಲಿ ಹೆಜ್ಜೆ ಗುರುತುಗಳಿಲ್ಲದ ಹಾದಿಯಲ್ಲಿ

ಬದುಕುತ್ತಿದ್ದಾರೆ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ಜೊತೆಗೆ ಕಾಲಾತೀತ ನೆಲೆಯಲ್ಲಿ ರಚನೆಗೊಂಡಿರುವುದನ್ನು ಕವಿತೆಯ ವಿಶೇಷವಾಗಿದೆ.

ಚಿನ್ನಸ್ವಾಮಿಯವರು ನೋವನ್ನು ಕಾವ್ಯ ಮಾಡುತ್ತಾರೆ ಇವರ ಕಾವ್ಯ ಹರಿತವಾದ ನುಡಿಚಾಟಿಯ ಏಟಿನಂತೆ ನಮ್ಮನ್ನು ಎಚ್ಚರಿಸುತ್ತದೆ, ಮತ್ತು ಹರಿತವಾದ ನೋವು ಶಿಲುಬೇರಿಸಿದ ಏಸುಕ್ರಿಸ್ತನ ಕೈ ಕಾಲು ಎದೆಗಳಿಗೆ ಮೊಳೆ ಬಡಿದಂತೆ ಅಂತಃಕರಣವನ್ನು ಮುಟ್ಟುತ್ತದೆ. ನೋವು ಮುಟ್ಟುವ ಹಾಗೆ ಏಟು ಮುಟ್ಟುವುದಿಲ್ಲ ಚಾಟಿ ಏಟಿಗಿಂತಲೂ ಈ ಹರಿಯವಾದ ನೋವು ನಮಗೆ ಬಹಳ ಮುಖ್ಯ ದಲಿತತ್ವದ ನೋವು ಎಲ್ಲಿಯವರೆಗೆ ಕಾಡುತ್ತಿರುತ್ತದೆಯೋ ಅಲ್ಲಿಯವರೆಗೆ ಚಿನ್ನಸ್ವಾಮಿಯವರು ಕವಿಯಾಗಿಯೇ ಇರುತ್ತಾರೆ.

ತನ್ನ ಅವಮಾನದ ಸ್ಥಿತಿ ಅತ್ಯಂತ ವೈಯಕ್ತಿಕವೂ ಹೌದು ಮತ್ತು ಎಲ್ಲ ಜನರ ಪಾಡೂ ಹೌದು ಎಂಬ ಭಾವನೆ ಅತ್ಯಂತ ತೀವ್ರವಾದಷ್ಟು ಈ ಸೂಕ್ಷ್ಮ ಮನಸಿನ ಕವಿ ನೋವನ್ನು ಕವನವಾಗಿಸುತ್ತಾರೆ ಅವಮಾನವನ್ನು ಯಾರು ಅನುಭವಿಸಿರುತ್ತಾರೋ ಅವಮಾನಿತನಗಿದ್ದುಕೊಂಡು ಆ ಅವಮಾನದಲ್ಲೇ ಯಾರು ಉಸಿರಾಡುತ್ತ ಜೀವಂತವಾಗಿರುತ್ತಾರೋ ಆ ವ್ಯಕ್ತಿಗಳು ಮಾತ್ರ ಇಂತಹ ಪದ್ಯ ಬರೆಯಲಿಕೆ ಸಾಧ್ಯ. ಆತ್ಮಕಥನದಂತೆ ಕಾಣುವ ಇವರ ಕವಿತೆಯ ಹಲವು ಪದ್ಯಗಳಲ್ಲಿ ದಲಿತತ್ವದ ನೋವು ವ್ಯಕ್ತವಾಗಿದೆ.

ನೆರಕೆಯಲ್ಲಿ ನಿರಿಕಿಸಿದ

ಸಿಲವಾರದ ಬಟ್ಟಲು ಹಿಡಿದು ಹೊರಗೆ

ಕುಕ್ಕರಗಾಲು ಕೂತು 'ಒಸಿ

ಕಾಫಿ ಉಯ್ತಿ ಸೊಮ್ಯೋ' ಎಂದು ಹಲುಬಿ

ಬೇಡುತ್ತಿದ್ದ ಅಪ್ಪನ ಕಂಡು ಬಿಸಿಯಾಗಿ ನಾನು

ತಳಮಳಗೊಂಡಿದ್ದು ಎಷ್ಟೋ ಸಲ

ಅಟ್ಟಿಗೆಲ್ಲಾ ತೊಪ್ಪೆ ಸಾರಿಸಿ ಇದ್ದ

ಅರಿವಾಣ ತಪ್ಪಲೆಗಳ ತೊಳೆದು ಬಳಿದು

ತುಪ್ಪದ ದೀಪ ಉರಿಸಿ ತಪ್ಪು ಕಾಣಿಕೆ

ಕಟ್ಟಿ 'ನಿನ್ನ ಪಾದ ನನ್ನವ್ವ' ಎಂದು

ಓಡೋಡಿ ಸಾಗಿ ಗುಡಿಯಾಚೆ

ಗಡಿಪಾರಾಗುತ್ತಿದ್ದ ನನ್ನವ್ವಳ ಪಾಡು ನೋಡಿ

ಹೊಟ್ಟೆ ತೋಳಿಸಿ ಕ್ಯಾಕರಿಸಿದ್ದು ಹಲವು ಸಲ.

– ಊರ ತೆಂಕಣ ತಜ್ಞರು

ಇಂತಹ ಸಾಲುಗಳನ್ನು ಗಮನಿಸಿದಾಗ ದಲಿತ ಬದುಕಿನ ಕರಾಳ ಚಿತ್ರಣ ಗೋಚರವಾಗುತ್ತದೆ. ಇವರ 'ಅಜ್ಜಿ ಮತ್ತು ಮೊಮ್ಮಗಳು' ಕವಿತೆಯಲ್ಲಿರುವುದು ಅಂದಿನ ಕವಿಯ ನೆನಪುಗಳೆ ಹೊರತು ಇಂದಿನ ಗಡ್ಡದಾರಿ ಚಿನ್ನಸ್ವಾಮಿಯವರಲ್ಲ ಎಂದು ಕವಿತೆಯಲ್ಲಿ ಓದಿದಾಗ ನಿಸ್ಸಂದೇಹವಾಗಿ ಹೇಳಬಹುದಾಗಿದೆ.

"ಅವಮಾನ ಕ್ರೌರ್ಯಗಳಿಗೆ ಗುರಿಯಾದ ಸಂದರ್ಭಗಳು ಮೆಲುದನಿಯಲ್ಲಿ ಕಾವ್ಯವಾಗುತ್ತಿದ್ದರೂ ಎಲ್ಲು ತೀವ್ರತೆಯನ್ನು ಕಳೆದುಕೊಳ್ಳುವುದಿಲ್ಲ ಮಿಗಿಲಾಗಿ ಇವೆಲ್ಲಾ ಬಹುಮುಖಿ ಪರಿಣಾಮಕ್ಕೆ ಕಾರಣವಾಗುತ್ತವೆ. ವಿಭಿನ್ನ ಅರ್ಥಲಯ, ರೂಪಕ ನಿರ್ಮಿಸಿ ಇಲ್ಲಿನ ಕವಿತೆಗಳಿಗೆ ಹೊಸತನವನ್ನು ತಂದಿದೆ" ಎಂಬುದು ಕಿ.ರಂ.ನಾಗರಾಜ ಅವರ ಅಭಿಪ್ರಾಯವಾಗಿದೆ.[೮]

### ೨. ಜೀತಪದ್ಧತಿಯ ಕರಾಳ ಮುಖದ ಅಭಿವ್ಯಕ್ತಿ:

ಚಿನ್ನಸ್ವಾಮಿಯವರ 'ಜೀತದಾಳಿನ ಗಾಥೆ' 'ಹಣೆ ಬರಹ' ಕವನಗಳು ಜೀತಪದ್ಧತಿಯನ್ನು ಪ್ರಶ್ನಿಸಿ ಬರೆದವಾಗಿವೆ. ಈ ಕವಿತೆಗಳಲ್ಲಿ ಜೀತವ್ಯವಸ್ಥೆಯಲ್ಲಿ ದಲಿತರು ಒಡೆಯನ ಅಡಿಯಾಳಾಗಿ ಅನುಭವಿಸುವ ಹೀನಾಯ ಸ್ಥಿತಿಯನ್ನು ಅನಾವರಣ ಮಾಡಲಾಗಿದೆ. 'ಹಣೆಬರಹ' ಒಂದಿಷ್ಟು ವಾಚ್ಯವೆನಿಸದರೂ ಕೂಡಾ ಸಾಮಾನ್ಯರಿಗೂ ಅರ್ಥವಾಗುವ ಕವನವಾಗಿದ್ದು ತಂದೆ-ಮಗನ ಸಂವಾದದಲ್ಲಿ ಇಡೀ ಜೀತವ್ಯವಸ್ಥೆಯಲ್ಲಿ ಉಂಟಾಗುವ ತಾರತಮ್ಯದ ನೀತಿ, ದಲಿತ ಬದುಕಿನ ದುಃಸ್ಥಿತಿಯನ್ನು ಕವಿ ವ್ಯಕ್ತಪಡಿಸಿದ್ದಾರೆ. ಒಡೆಯನ ಜಮೀನಿನಲ್ಲಿ ಎಲ್ಲ ಬಗೆಯ ಕೆಲಸಗಳನ್ನು ಮಾಡಿದರೂ ಕೂಡಾ ದಲಿತರಿಗೆ ಕನಿಷ್ಟ ಬದುಕಿಗೆ ಆಗುವಷ್ಟು ಆಹಾರ ಕೊಡದೇ ಇರುವುದು ಒಡೆಯರ ದಬ್ಬಾಳಿಕೆಯನ್ನು ತಿಳಿಸುವಂತದ್ದು.

ಈ ಕವಿತೆಯಲ್ಲಿ ತಂದೆಗೆ ಮಗನು ಪ್ರತಿಯೊಂದು ಕೆಲಸದಲ್ಲಿ ಪ್ರಶ್ನಿಸುತ್ತಾ ಬಂದಿರುವುದನ್ನು ಗಮನಿಸಿದರೆ ಮಗನದು ವ್ಯವಸ್ಥೆಯನ್ನು ಪ್ರತಿಭಟಿಸುವಂತೆ ಸಹೃದಯರಿಗೆ ಗೊತ್ತಾಗುತ್ತದೆ. ಜೀತಪದ್ಧತಿಯೆಂದಾಗ ಒಡೆಯರ ಮನೆಯಲ್ಲಿ ಹಸುವಿನ ಹಾಲು ಕರೆಯುವುದು, ತೊಪ್ಪೆ ಎತ್ತುವುದು, ವ್ಯವಸಾಯ ಮಾಡುವುದು, ಇತ್ಯಾದಿಗಳು ಸಹಜವಾಗಿದ್ದರೂ ಇದರ ಹೆಚ್ಚಿನ ಫಲಾಪೇಕ್ಷೆ ಒಡೆಯನದೆ ಆಗಿರುತ್ತದೆ. ಜೀತಗಾರಿಕೆಯಲ್ಲಿ ಆಗುವ ಅನ್ಯಾಯವನ್ನು ಪ್ರತಿಭಟಿಸುವ ಈ ಮಗನು ಹೊಸ

ತಲೆಮಾರಿನ ಪ್ರತಿನಿಧಿಯಾಗಿ ಕಂಡುಬರುತ್ತಾನೆ. ಕವಿತೆಯ ಕೊನೆಯಲ್ಲಿ ಮಗ ತನ್ನ ಮಾತನ್ನು ಮುಗಿಸುವಾಗ 'ಇಷ್ಟೇ ನಮ್ಮ ಹಣೆಬರಹ ಅನ್ನು' ಎಂದಿರುವುದನ್ನು ಗಮನಿಸಿದರೆ ಜೀತಪದ್ಧತಿಯ ಕರಾಳತೆ ಗೋಚರವಾಗುತ್ತದೆ ಹಾಗೆಯೇ 'ಹೀಗೊಂದು ಬದುಕು' ಎಂಬ ಕವಿತೆಯಲ್ಲಿಯೂ ಸಹ ಒಡೆಯನ ಅಡಿಯಾಳಾಗಿ ಕೆಲಸಮಾಡುವ ಜೀತಗಾರಿಕೆಯ ದಲಿತರ ಜೀವನ ವ್ಯಕ್ತಗೊಂಡಿದೆ.

ಕಿರ್ರನೆ ಕಾ, ಕಾ ಗೈಯುವ ಕಾಗೆಗಳ ಸದ್ದಿಗೆ ಬೆಳಿಗ್ಗೆ ಎದ್ದು ದಲಿತರು ರಾತ್ರಿ ಮಲಗುವ ತನಕ ಗೌಡರ ಹಟ್ಟಿಯ ಕೊಟ್ಟಿಗೆ ಗೂಡಿಸಿ, ತಂಗಳು ಮುದ್ದೆ ತಿಂದು ಸುಡುಬಿಸಿಲಲ್ಲಿ ಕೃಷಿ ಚಟುವಟಿಕೆಯನ್ನು ಮಾಡುವುದು ಒಡೆಯರ ಕಣಜ ತುಂಬುವುದಕ್ಕೆ ಹಾಗೆಯೇ ಹಸು ಎಮ್ಮೆ, ಕುರಿಗಳನ್ನು ಕೊಬ್ಬಿಸುವವಳು ನಿನ್ನಾರೋ ಸರಮಾಡಿಸುವುದಕ್ಕೆ ಹೀಗೆ ಜೀವನದ ಉದ್ದಕ್ಕೂ ಅನ್ಯರ ಒಳಿತಿಗಾಗಿ ಶ್ರಮಿಸುವ ದಲಿತನ ಹೀನಾಯ ಸ್ಥಿತಿ ಇಲ್ಲಿ ವ್ಯಕ್ತಗೊಂಡಿದೆ. ಮುಖ್ಯವಾಗಿ ಈ ಕವಿತೆಯಲ್ಲಿ ಅಜ್ಞಾನದ ಆದಿಯಲ್ಲಿ ನಡೆಯುತ್ತಿರುವ ದಲಿತರು ಊಳಿಗಮಾನ್ಯ ವ್ಯವಸ್ಥೆಯ ಕರಾಳ ವಸ್ತುಗಳಲ್ಲಿ ಶೋಷಣೆಗೊಳಗಾಗುತ್ತಿರುವ ರೀತಿಯನ್ನು ಧ್ವನಿಪೂರ್ಣವಾಗಿ ಹೇಳುವ ಪ್ರಯತ್ನ ಮಾಡಲಾಗಿದೆ. ಇದಕ್ಕೆ ನಿದರ್ಶನವಾಗಿ ಈ ಕೆಳಗಿನ ಸಾಲುಗಳನ್ನು ಗಮನಿಸಬಹುದು.

ಒಡೆಯನ ದೂರ್ತನಕ್ಕೆ
ಒಡೆಯನ ದರ್ಪಕ್ಕೆ
ಹಿಗ್ಗಾ ಮುಗ್ಗಾದ
ಒಡಲುಗಳು ಬೆಸೆದು
ಗುಡಿಸಿಲಿನೊಳಗೆ
ನಿದ್ದೆ ಹೋಗುವಾಗ ಗೂಬೆ
'ಗುಕ್' ಎನ್ನುತ್ತದೆ–ಹೀಗೊಂದು ಬದುಕು

ದಣಿದ ಬಡವರು ರಾತ್ರಿ ಮಲಗುವಾಗ 'ಗೂಬೆ ಗುಕ್' ಎನ್ನುತ್ತದೆ. ಎನ್ನುವಲ್ಲಿ ದಲಿತರ ಬದುಕಿನ ಧಾರುಣತೆಯನ್ನು ತಿಳಿಸುವಾಗ ಈ ಸಾಲುಗಳು ಸಾಕು ಅನಿಸುತ್ತದೆ.

ಇದೇ ನೆಲೆಯಲ್ಲಿ ರಚನೆಗೊಂಡಿರುವ 'ಹೀಗೊಂದು ಬವಣೆ' ಕವಿತೆಯಲ್ಲಿ ಕ್ರಾಂತಿಯ ಸೋಗಿಗಿಂತ ದಲಿತತ್ವದ ನೋವು ದಟ್ಟವಾಗಿ ಹರಡಿದೆ. ತರತಮದ ಈ ಜಗತ್ತಿನಲ್ಲಿ ಉಳ್ಳವರು ಇಲ್ಲದವರನ್ನು ಎನೆಲ್ಲ ಶೋಷಣೆ ಮಾಡುವುದನ್ನು ಕಂಡು ಕವಿ ಮಮ್ಮಲಮರುಗುತ್ತಾರೆ. ಈ ಕವಿತೆಯು ಕೃತಿಯಲ್ಲಿನ ತಾರತಮ್ಯ ನೀತಿಯನ್ನು ತಿಳಿಸುತ್ತದೆ. ಉಳ್ಳವರ,

ಜಮೀನ್ದಾರರ ಅಡಿಯಾಳಾಗಿ ಬದುಕುವ ದಲಿತರ ದುಸ್ಥಿತಿ ಈ ಕವನದಲ್ಲಿ ವ್ಯಕ್ತಗೊಂಡಿದೆ. ವ್ಯವಸ್ಥೆಯಲ್ಲಿ ಮೇಲ್ವರ್ಗದವರ ದಬ್ಬಾಳಿಕೆ, ಅಂದರೆ ಇಡೀ ಕೃಷಿ ಚಟುವಟಿಕೆಯನ್ನು ಬಡವರು ಮಾಡಿದರೂ ಕೂಡಾ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗದೆ ಇರುವುದು ಕನಿಷ್ಟ ಮಟ್ಟದ ಜೀವನಕ್ಕೆ ಯಾವುದೇ ವಸ್ತುಗಳನ್ನು ಒದಗಿಸದೇ ಬಹಳ ಹೀನತನದ ಜೀವನಕ್ಕೆ ಉಳ್ಳವರು ಎಡೆ ಮಾಡಿಕೊಡುತ್ತಾರೆ.

ಉಳ್ಳವರಿಗೆ ಒಕ್ಕಣೆ. ಭತ್ತ
ಇಲ್ಲದವರಿಗೆ ಬವಣೆ ಬಳ್ಳ-ಹೀಗೊಂದು ಬದುಕು

ಎಂದಿರುವುದು ಕವಿಯ ಪ್ರತಿರೋಧದ ಬದಲು ಮೃದು ಧೋರಣೆ ವ್ಯಕ್ತವಾದಂತೆ ಭಾಸವಾಗುತ್ತದೆ. ಅಂದರೆ ಈ ಸಾಲು ದಲಿತರಿಗಿರುವ ಧಾರುಣತೆಯ ಸ್ಥಿತಿಯನ್ನು ತಿಳಿಸುವ ಸಾಲಾಗಿದೆ. ಈ ಕವಿತೆಯಲ್ಲಿ ಕವಿ ವ್ಯವಸ್ಥೆಯಲ್ಲಿನ ದಲಿತರ ಬದುಕನ್ನು ತಿಳಿಸುವುದು ಹಾಗೂ ಬಹು ಕಷ್ಟದ ಜೀವನ ದಲಿತರದಾಗಿದೆ ಎನ್ನುವ ಬವಣೆ ಈ ಕವಿತೆಯಲ್ಲಿ ವ್ಯಕ್ತಗೊಂಡಿದೆ.

**ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು:**

ಚಿನ್ನಸ್ವಾಮಿಯವರ ಕವಿತೆಯ ನೆಲೆಗಳು ಎರಡು ಮುಖಗಳಲ್ಲಿ ನಿಂತಿದೆ. ಮೊದಲನೆಯದು ಜನಾಂಗದ ಸ್ಮೃತಿ, ಎರಡನೆಯದು ಧ್ಯಾನ. ನಿಜವಾದ ಸಾಮಾಜಿಕ ಕವಿಯಾದವನು ನಿಜ ಕಥೆಗಾರನು ಆಗಿರುತ್ತಾನೆ. ಅದರಂತೆ ಸಾಮಾಜಿಕತೆ ಇವರ ಕವಿತೆಯ ಮೂಲ ದ್ರವ್ಯವಾಗಿದ್ದು ಸಾಮಾಜಿಕ ಅಂಶಗಳು ವಸ್ತುವಿನ ದೃಷ್ಟಿಯಿಂದ ಪ್ರಮುಖ ಪಾತ್ರ ವಹಿಸುತ್ತದೆ. ಈ ನಿಟ್ಟಿನಲ್ಲಿ ದಲಿತರು ತಮ್ಮದೇ ಆದ ಸಂಸ್ಕೃತಿಯನ್ನು ರೂಪಿಸಿಕೊಂಡು ಸ್ವಾಭಿಮಾನಗಳಾಗಿ ಬದುಕನ್ನು ರೂಪಿಸಿಕೊಳ್ಳದಿದ್ದರೆ ಸ್ವಾಭಿಮಾನವನ್ನು ಕಳೆದುಕೊಂಡು ಅವಮಾನಕರ ಬದುಕನ್ನು ಸಾಗಿಸಬೇಕಾಗುತ್ತದೆ. ಎಂಬುದನ್ನು 'ಹಾದಿ' ಕವಿತೆಯಲ್ಲಿ ಇದಕ್ಕೆ ನಿದರ್ಶನ ಈ ಸಾಲುಗಳು

ನಿಮ್ಮದೇ ಆದ ನಿಮ್ಮಂತೆ
ಉಳಿಯುವ
ಅಪ್ಪನೆಟ್ಟ ಆಲದ ಬೇರುಗಳನ್ನು ಕಿತ್ತೊಗೆದು
ಜೋತುಬಿದ್ದ ಕಂದಾಚಾರಗಳ
ಶವಗಳನ್ನು ತುಂಡರಿಸಿ
ಹಾದಿ ಹೊಸೆಯಿರಿ

-ಹಾದಿ

'ಜೀತದಾಳಿನ ಗಾಥೆ' ಕವಿತೆಯು ಜೀತದಾಳಿನ ಗಟ್ಟಿತನವನ್ನು ತಿಳಿಸುತ್ತದೆ. ವ್ಯವಸ್ಥೆಯಲ್ಲಿದ್ದುಕೊಂಡೆ ಜೀತಗಾರಿಕೆಯನ್ನು ಆನೆಯಂತೆ ಪ್ರತಿಭಟಿಸುವುದು ಗೋಚರವಾಗುತ್ತದೆ. ಜೀತಪದ್ಧತಿಯಲ್ಲಿದ್ದ ಬಡವರು ಒಡೆಯನ ಆಡಿಯಾಳಾಗಿದ್ದ ದುಸ್ಥಿತಿಯನ್ನು ನೋವನ್ನು ಮೇಲುದನಿಯಲ್ಲಿ ಕವಿ ವ್ಯಕ್ತಪಡಿಸುತ್ತಾರೆ.

ಕವಿತೆಗಳಿಗೆ ಹೊಸ ಸಾಂಸ್ಕೃತಿಕ ಲಯಗಳು ಮೈಗೂಡಿಸಿಕೊಂಡಾಗ ಸಹಜವಾಗಿ ಬೇರೆಯಾದ ಧನಿಗಳು ಅವತರಿಸುವುದು ಸಾಧ್ಯ ಎಂದು ಗ್ರಹಿಸಬಹುದಾಗಿದೆ.

ಗೆದ್ದಲು ಹುಳುಗಳು' ಕವಿತೆಯಲ್ಲಿ ಅಸ್ಪೃಶ್ಯನ ಈ ಸ್ಥಿತಿಗೆ ಕಾರಣವಾಗಿರುವ ಭಾರತೀಯ ಸಂಸ್ಕೃತಿ ಬಗ್ಗೆ ಹೇಳುತ್ತಾರೆ. ಭಾರತೀಯ ಸಂಸ್ಕೃತಿಯನ್ನು ಸಾಂಸ್ಕೃತಿಕ ರಾಷ್ಟ್ರೀಯತೆಯ ಮೂಲಕ ಉದಾತ್ತೀಕರಿಸುವ ಮಾದರಿಗಳು ಈ ಸಂಸ್ಕೃತಿಯ ಒಳಗೆ ಇರುವ ಅಸಮಾನತೆಯನ್ನು ಲೆಕ್ಕಿಸದೇ ಹೋಗಿದ್ದರಿಂದ ವಿಕೃತ ರಾಷ್ಟ್ರೀಯತೆ ಉಗ್ರವಾಗಿ ಬೆಳೆಯುತ್ತಲೇ ಇದೆ. ಅತ್ಯಂತ ಮಾರ್ಮಿಕವಾಗಿಯೇ ಈ ಕವಿತೆಯಲ್ಲಿ ಅವರು ದಲಿತರ ಗೆದ್ದಲುತನವನ್ನು ನಿರ್ಧರಿಸುತ್ತಾರೆ.

ಹೀಗೆ ಚಿನ್ನಸ್ವಾಮಿಯಬರು ತಮ್ಮ ಕವಿತೆಗಳಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ವ್ಯಕ್ತಪಡಿಸುವ ಸಲುವಾಗಿ ವಿಭಿನ್ನ ಮಾದರಿಯನ್ನು ಅನುಸರಿಸುತ್ತಾರೆ ಈ ದೃಷ್ಟಿಯಿಂದ ಇವರು 'ನನ್ನ ಕವಿತೆಗೆ' ಎಂಬ ಕವನದ ಸಾಲುಗಳಲ್ಲಿ ಕವಿತೆಯ ಗಹನತೆಯನ್ನು ಹಿಡಿಯುವ ಪ್ರಯತ್ನ ಮಾಡಿದ್ದಾರೆ.

ನನ್ನ ಕವಿತೆಗೆ ಅಲ್ಲಮ್ಮನ ಮೆದುಳು

ಬಸವಣ್ಣನ ಹೃದಯವಿರಲಿ

ನನ್ನ ಕವಿತೆಗೆ ಬುದ್ದನ ಸ್ವಾಸ್ಥ್ಯ

ಆನಂದರ ಸ್ನೇಹಬಲ

ಇರಲಿ ಬಾಹುಬಲಿಯ ವೈರಾಗ್ಯ[೧೦]

ಭರತನ ಪ್ರೀತಿ

ನನ್ನ ಕವಿತೆಗೆ ಪೈಗುಂಬರರ ನಿಷ್ಠೆ

ಗೊಮ್ಮಟನ ಏಕಾಗ್ರತೆ ಬರಲಿ

ನನ್ನ ಕವಿತೆಗಿರಲಿ ರಕ್ತ ಸಿಕ್ತ ಶಿಲುಬೆಯ ನೋವು

ಅಂತೆಯೇ ಯೇಸುವಿನ ಕ್ಷಮೆ ನನ್ನ ಕವಿತೆಗೆ ಶಿವನ ಢಮರುಗ

ಕೃಷ್ಣನ ರಸಿಕತೆಯೂ ಬೇಕು

ಇರಲಿ ಗಾಂಧೀಯ ಸರಳತೆ

ಅಂಬೇಡ್ಕರರ ಛಲ[೧೧]

ದೇಶಿ ನೆಲೆಯಲ್ಲಿ ಬುದ್ಧತನವನ್ನು ಹುಡುಕುವ ಆ ಮೂಲಕ ಮುನಷ್ಯತ್ವದ ಸಂವೇದನೆಗಳನ್ನು ಕಟ್ಟಿಕೊಳ್ಳುವ ತಹತಹಿಕೆ ಇವರ ಕಾವ್ಯಾದಾಳದ ಜೀವಂತಿಕೆಯಾಗಿದೆ ಇಲ್ಲಿ ಭಾರತೀಯತೆಯನ್ನು ಪ್ರತಿನಿಧಿಸುವ ಕಾವ್ಯ ಮತಿಗಾಗಿ ಕವಿ ಹಂಬಲಿಸುತ್ತಿದ್ದಾನೆ.

'ನಾನೊಂದು ಮರವಾಗಿದ್ದರೆ' ಕವಿತೆ ವೃಕ್ಷ ರೂಪದಲ್ಲಿ ಹಲವು ಕ್ರಿಯಾತ್ಮಕ ಸಾಮಾಜಿಕ ಲಯಗಳುಹೇಗೆ ಸಂಘಟಿತಗೊಳ್ಳುತ್ತಿದ್ದವು? ಈ ವೃಕ್ಷ ರೂಪಕವು ಹೊತ್ತಿರುವ ಸಾಂಸ್ಕೃತಿಕ ಲಯಗಳನ್ನು ಈ ಕವಿತೆ ವಿವರಿಸಿ ಹೇಳುತ್ತದೆ. ಅದರಂತೆ ನಮ್ಮ ಕವಿಗಳಿಗೆ ನಾಟಿದ ಶಕ್ತಿ ಲಯಗಳ ಬಗೆಗೆ ತುಂಬಾ ಹುಚ್ಚು. ಆ ಹುಚ್ಚು ಕವಿತೆಯೊಳಗಿನ ಸಾಂಸ್ಕೃತಿಕ ದನಿಗಳನ್ನು ಕೆಲವೊಮ್ಮೆ ಮುಚ್ಚಿ ಹಾಕಿಬಿಡುತ್ತದೆ.

ಅದೇ ರೀತಿಯಾಗಿ 'ಅಜ್ಜಿ ಮತ್ತು ಮೊಮ್ಮಗಳು' 'ನಂದಿ ಹೋಗಿಯಿತೆ ಬೆಳಕು' 'ಎಲುಬಿನ ಹಂದರದೊಳಗೆ' ಇವೇ ಮುಂತಾದ ಕವಿತೆಗಳು ನಿರ್ವಿಘ್ನವಾಗಿ ಬೇರೆಯೇ ಆದ ದಾರಿಯನ್ನು ಹಿಡಿದು ತೋರಿಸುತ್ತವೆ. ಇವು ಕೇವಲ ಕವಿತೆಗಳಾಗಿ ಮೈದಾಳದೆ, ಸಾಂಸ್ಕೃತಿಕ ಲಯದ ಅನುಸಂಧಾನದಲ್ಲಿ ಕವಿತೆಗಳಾಗಿ ರೂಪುಗೊಂಡಿವೆ. ಈ ಎಚ್ಚರ ಶತಮಾನದ ಕೊನೆಯ ಅಂಚಿನಲ್ಲಿರುವ ಕವಿಗೆ ಹೊಸ ಧಾತುಗಳನ್ನು, ಜೀವದಾನ ಮಾಡಿದೆ. ಕವಿ ಈ ದಾರಿಯಲ್ಲಿ ನಡೆಯುತ್ತಿರುವ ಸಾಂಸ್ಕೃತಿಕ ಸಾಮಾಜಿಕ ಕವಿ ಇವರಾಗಿದ್ದಾರೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

**ಅಡಿ ಟಿಪ್ಪಣಿಗಳು**

೧. ಕೊಂಡಿಗಳು ಮತ್ತು ಮುಳ್ಳು ಬೇಲಿಗಳು: ಬಿ.ಚಿನ್ನಸ್ವಾಮಿ ಪುಟ–೧

೨. ಕೊರಳು–ಕೊಳಲು: ಜಿ.ಎಸ್.ಆಮೂರ ಪುಟ–೨೨೪

೩. ಬಯಲ ಬೆಳಕು: ಸಂ.ಅಪ್ಪಗೆರೆ ಸೋಮಶೇಖರ:ಪುಟ–೨೮

೪. ಚಪ್ಪಲಿ ಮತ್ತು ನಾನು: ಮೂಡ್ನಾಕೂಡು ಚಿನ್ನಸ್ವಾಮಿ ಪುಟ–೧

೫. ಅದೇ ಪುಸ್ತಕ ಪುಟ–೧

೬. ನಾನೊಂದು ಮರವಾಗಿದ್ದರೆ: ಬಿ.ಚಿನ್ನಸ್ವಾಮಿ ಪುಟ–೧

೭. ಅದೇ ಪುಸ್ತಕ ಪುಟ–೧

೮. ಬಯಲ ಬೆಳಕು ಸಂ.ಅಪ್ಪಗೆರೆ ಸೋಮಶೇಖರ ಪುಟ–೧೪೧

೯. ಕೊಂಡಿಗಳು ಮತ್ತು ಮುಳ್ಳುಬೇಲಿಗಳು:ಬಿ.ಚಿನ್ನಸ್ವಾಮಿ ಪುಟ–೩೮

೧೦. ಚಪ್ಪಲಿ ಮತ್ತು ನಾನು ಬಿ.ಚಿನ್ನಸ್ವಾಮಿ ಪುಟ–೫೮

೧೧. ಅದೇ ಪುಸ್ತಕ ಪುಟ–೨೮

ನೋವು ಇವರ ಕವಿತೆಯ ಸ್ಥಾಯೀಭಾವ ಆದ್ದರಿಂದ ದಲಿತರು ಅಸ್ಪೃಶ್ಯತೆಯನ್ನು ನಿವಾರಣೆ ಮಾಡಿ ಸಮಾನತೆಯನ್ನು ತರಬೇಕಾದ ಪ್ರತಿಭಟನೆ ಅಥವಾ ಕ್ರಾಂತಿ ದಲಿತರು ಮಾಡಬೇಕಾಗುತ್ತದೆ. ಪ್ರತಿಭಟನೆಗಾಗಿ ಹುಟ್ಟಿದ್ದು ದಲಿತ ಕಾವ್ಯ. ದಲಿತ ಕಾವ್ಯವು ೨೦ರ ದಶಕದಲ್ಲಿ ಹುಟ್ಟಿದ್ದು ಎಂದು ತಿಳಿದರೂ ಪ್ರತಿಭಟನೆಯ ನೆಲೆಯನ್ನು ನಾವು ಕನ್ನಡ ಸಾಹಿತ್ಯದ ಆರಂಭದಿಂದಲೇ ಗುರುತಿಸಬಹುದು. ಆದಿಕವಿ ಪಂಪನ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಮಾತಿನಲ್ಲಿ ಅದರ ಮೂಲವನ್ನು ಗುರುತಿಸಬಹುದಾಗಿದೆ.

ಕಾವ್ಯ ಎಂಬುವುದು ಜನ್ಮಾಂತರದ ಪ್ರತಿಭೆಯಾಗಿರದೆ ಸ್ವತಃ ಅನುಭವಾಂಶಗಳನ್ನು ಒಳಗೊಂಡಿರುವ ಸತ್ಯ ಘಟನೆಗಳ ಸರಮಾಲೆಯಾಗಿ ದಲಿತ ಕಾವ್ಯಗಳಲ್ಲಿ ಮೂಡಿದೆ. ಕಾವ್ಯ ಎಂದರೆ ಕಲ್ಪನೆಯಿಂದ ಕೂಡಿದ್ದು ಎಂಬ ಭಾವನೆ ಇದೆ. ಆದರೆ ದಲಿತ ಕಾವ್ಯಗಳಲ್ಲಿ ಕಲ್ಪನೆಗಳು ಇವರ ಜೀವನ ಪಾತ್ರಗಳನ್ನು ಕುರಿತದ್ದಾಗಿದೆ.

ಬಿ.ಚಿನ್ನಸ್ವಾಮಿಯವರ ಕಾವ್ಯದಲ್ಲಿ ಪ್ರತಿಭಟನೆಗಳು ಸಿಟ್ಟಿನ ಮೂಲಕವಾಗಲೀ, ಸುಖದ ಮೂಲಕವಾಗಲೀ ಬಂದದ್ದಲ್ಲ. ಅದು ವಿಷಾದದ ನಡುವೆ ಹುಟ್ಟಿಕೊಂಡಿದೆ. ಕವಿಯ ಸಿಟ್ಟು ಮನುಷ್ಯನ ಮೇಲಲ್ಲ, ಅದು ವ್ಯವಸ್ಥೆಯ ಮೇಲಿದೆ. ಮನುಷ್ಯನ ಮೇಲಿನ ಸಿಟ್ಟು ಪ್ರೀತಿಸುವುದನ್ನು ಕಲಿಸುವುದಿಲ್ಲ. ಈ ಪ್ರಜ್ಞೆಯಿಂದಲೇ ಕವಿ ಮನುಷ್ಯನನ್ನು ಪ್ರೀತಿಸುತ್ತಾರೆ. ಮನುಷ್ಯ ಆದಷ್ಟು ಅಂತರದಿಂದ ಹತ್ತಿರವಾಗಬೇಕೆನ್ನುತ್ತಾರೆ. ಹಾಗಾಗಿಯೇ ಅವರ ಕಾವ್ಯ ಏಕ ಕಾಲಕ್ಕೆ ಧ್ಯಾನವನ್ನು ಇಂದಿನ ಅಪರಿಚಿತರಿಗೆ ಪರಿಚಯವನ್ನು ಏಕಾಂತದ ತಲ್ಲಣಗಳನ್ನು ಒಟ್ಟಿಗೆ ಅಭಿವ್ಯಕ್ತಿಸುತ್ತದೆ. ಆದ್ದರಿಂದ ಅಸ್ಪೃಶ್ಯ ಆಚರಣೆಯನ್ನು ನಿವಾರಣೆ ಮಾಡಬೇಕಾದರೆ ಈ ಕೆಳಕಂಡಂತಹ ಮಾರ್ಗ ಅಥವಾ ಪ್ರತಿಭಟನೆ ಮಾಡಬೇಕೆಂದು ಕವಿ ಹೇಳುತ್ತಾರೆ.

೧. ಸಾಮಾಜಿಕ ಪ್ರತಿಭಟನೆ:

೨. ಆರ್ಥಿಕ ಪ್ರತಿಭಟನೆ

೩. ಸಾಂಸ್ಕೃತಿಕ ಪ್ರತಿಭಟನೆ

೪. ಧಾರ್ಮಿಕ ಪ್ರತಿಭಟನೆ

**೧. ಸಾಮಾಜಿಕ ಪ್ರತಿಭಟನೆ:**

ಚಿನ್ನಸ್ವಾಮಿಯವರ ಕಾವ್ಯ ದಲಿತ ಬಂಡಾಯದ ಉಚ್ರಾಯ ಕಾಲದಲ್ಲಿ ರೂಪುಗೊಂಡಿದ್ದರಿಂದ ಸಹಜವಾಗಿಯೇ ಅವರ ಕಾವ್ಯದ ಪ್ರತಿಭಟನೆ ದಲಿತ ಬಂಡಾಯದ ಅಜೇಂಡಾಕ್ಕೆ ಪೂರಕವಾಗಿವೆ. ಕನ್ನಡ ಕಾವ್ಯ

ಪರಂಪರೆಯಲ್ಲಿಯೇ ದಲಿತ ಬಂಡಾಯ ಕಾವ್ಯ ಸಾಮಾಜಿಕ ಶ್ರೇಣಿಕೃತ ವ್ಯವಸ್ಥೆಯಲ್ಲಿ ಮನುಷ್ಯನಿಗೆ ಮಾತ್ರ ಸ್ಥಾನ ದೊರಕಿಸಿರುವ ಕಾವ್ಯವಾದ್ದರಿಂದ ಅವರ ಪ್ರತಿಭಟನೆ ಪರಂಪರೆಗಿಂತ ಭಿನ್ನವಾಗಿದೆ.

ಶ್ರೇಣಿಕೃತ ವ್ಯವಸ್ಥೆಯಲ್ಲಿ ಮನುಷ್ಯ ಮನುಷ್ಯನಾಗಿ ರೂಪುಗೊಳ್ಳಲು ಸಾಧ್ಯವಿಲ್ಲದ ಮಾತು. ಅತ್ಯಂತ ಸಂಕೀರ್ಣವಾದ ಧಾರ್ಮಿಕ ನಂಬಿಕೆಗಳು ಸಮಾಜದಲ್ಲಿ ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳಲು ನಿರಂತರ ಹೋರಾಟದಲ್ಲಿ ತೊಡಗಿರಬೇಕಾಗುತ್ತದೆ. ಮನುಷ್ಯ ಒಂದು ಸಮಾಜ ಜೀವಿಯಾಗಿ ಆತನ ಸುತ್ತಲೂ ಆವರಿಸಿಕೊಂಡಿರುವ ಎಲ್ಲಾ ಸಂಬಂಧಗಳಲ್ಲಿಯೂ ಪ್ರತಿಭಟನೆಯ ಕಾವು ತೀವ್ರವಾಗಿರುತ್ತದೆ. ಸಾಮಾಜಿಕ ವಲಯಗಳಲ್ಲಿ ನಡೆಯುವ ಇಂತಹ ಹೋರಾಟಗಳ ಸಂವೇದನೆ ಭಾಷಿಕ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ.

ಚಾರಿತ್ರಿಕ ವೈರುಧ್ಯಗಳನ್ನು ಅದರ ಸಾಮಾಜಿಕ ನೆಲೆಯಲ್ಲಿ ಗ್ರಹಿಸುವ ಕವಿ ಪ್ರತಿಭಟನೆಯನ್ನು ಅದರೊಂದಿಗೆನೆ ಗುರುತಿಸಲು ಪ್ರಯತ್ನಿಸುತ್ತಾರೆ. ಅವರ 'ಕ್ರಾಂತಿ ಏಕೆ ಬೇಕು' ಎಂಬ ಕವಿತೆಯ ಸಾಲುಗಳು ಕ್ರಾಂತಿಯ ಆದರ್ಶ ಮತ್ತು ಕನಸುಗಳ ಬಗೆಗೆ ಹೇಳುತ್ತದೆ. ವೈಚಾರಿಕತೆ ತೆರೆಯದ ಮನುಷ್ಯನ ತಲೆಯೇ ಒಂದು ಮೌಢ್ಯದ ಗೂಡಾಗಿದೆ. ಈ ಮೌಢ್ಯದಂತಹ ಕ್ಷುದ್ರ ವ್ಯವಸ್ಥೆಯನ್ನು ಸ್ಫೋಟಿಸಲು ಕ್ರಾಂತಿ ಬೇಕೆಂದು ಕವಿ ಹೇಳುತ್ತಾರೆ.

ಈ ಕಂದು ಜನರನ್ನು
ಬೆಳೆಯಲು ಬಿಡದ
ಕ್ಷುದ್ರ ವ್ಯವಸ್ಥೆಯನ್ನು
ಸ್ಫೋಟಿಸಲು ಬೇಕು
'ಕ್ರಾಂತಿಯ ಜ್ವಾಲೆ'[7]

ಇಲ್ಲಿ ದಲಿತರನ್ನು ಕಂದು ಜನಕ್ಕೆ ಹೋಲಿಸಿ ಕಂದು ಜನರ ಪ್ರಗತಿಗಾಗಿ ಕ್ರಾಂತಿಯ ಅವಶ್ಯಕತೆಯನ್ನು ವಿವರಿಸುತ್ತಾರೆ. ಸಾಮಾಜಿಕ ವೈರುಧ್ಯಗಳೆ ಹೇಗೆ ಪ್ರತಿಭಟನೆಗೆ ಕಾರಣವಾಗುತ್ತವೆ ಎಂಬುವುದನ್ನು ಈ ಪದ್ಯದ ಮೂಲಕ ಗ್ರಹಿಸಬಹುದು.

'ಪಲಾಯನ' ಎನ್ನುವ ಇನ್ನೊಂದು ಕವಿತೆಯಲ್ಲಿ ಅಸ್ಪೃಶ್ಯತೆಯನ್ನು ಬೀದಿ ನಾಯಿಗೆ ಹೋಲಿಸುವ ಪರಿ ಧ್ವನಿಪೂರ್ಣವಾಗಿದೆ. ಅಂಬೇಡ್ಕರ್ ಸಾಮಾಜಿಕ ನ್ಯಾಯದ ಪರಿಕಲ್ಪನೆಗೂ ದಲಿತರ ಬಗೆಗಿರುವ ಸವರ್ಣೀಯರ ಅಸಹನೆ ದಲಿತರಿಗೆ ಮೀಸಲಾತಿಯನ್ನು ಜಾರಿಗೊಳಿಸುವುದರಲ್ಲಿ ಇದೆ ಎಂದು ತೋರುತ್ತದೆ.

ಪ್ರೀತಿ ನಮಗಿಲ್ಲಿ ದುಬಾರಿ

ಅನುಕಂಪ ಮಾತ್ರ ಉಂಟು

ಬೀದಿನಾಯಿಗಳಿಗಿಡುವ ತಂಗಳೂಟದಂತೆ

ನಾವಾದರೂ ಪ್ರಾಣಿಗಳಲ್ಲ.[೨]

ಈ ಕವಿತೆಯಲ್ಲಿ ಅಸ್ಪೃಶ್ಯತೆಯ ಬಗೆಗಿನ ವಿಷಾದ, ಅನುಕಂಪ ಮತ್ತು ಅಸಹನೀಯತೆಗಳಲ್ಲಿದೆ. ಇಂತಹ ಅಂಶಗಳು ಸಾಮಾಜಿಕ ಕ್ರಾಂತಿಯತ್ತ ತುಡಿಯುತ್ತವೆ. ಅದೇ ರೀತಿಯಾಗಿ 'ಊರ ತೆಂಕಣ ತಜ್ಞರು' ಕವಿತೆಯ ಕೊನೆಯ ಭಾಗದಲ್ಲಿ ಸಮಾನತೆಗಾಗಿ ಮಾಡುವ ಕ್ರಾಂತಿ ವ್ಯಕ್ತಗೊಂಡಿದೆ.

ಬ್ರಾಹ್ಮಣರಿಗೆ ಮುಕ್ತಿ ಮಾರ್ಗವೇ ಸುಲಭ!

ಹೊಲೆ-ಮಾದಿಗರಿಗೆ ಹೋಟೆಲಿನ ಮಾರ್ಗವು ದುರ್ಲಭ

ಇಷ್ಟು ಪ್ರಜ್ಞಾಪೂರ್ವಕವಾಗಿ ವಿಚಾರ ಮಾಡುವ

ತಜ್ಞರಾಗಿ ತುಂಡು ಹುಡುಗರಾದ ನಾವು ಬೆಳೆದದ್ದು ನಂತರ

ಮೇಲಿನ ಕೇರಿಯ ಮಹದೇಶ್ವರ ಕಾಫಿ ಕ್ಲಬ್‌ಗೆ ಲಗ್ಗೆ ಹಾಕಿ

ಇಡ್ಲಿ ದೋಸೆ ನುಂಗಿದ್ದು, ಊರಿನ ದೂರಮಾರಿ

ಪೋಲೀಸ ಪ್ರವೇಶ, ಇತ್ಯಾದಿಯೊಂದು ಘಟನೆ.[೩]

ಇವೆಲ್ಲಾ ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುತ್ತಾ ನಡೆದ ಕ್ರಾಂತಿಯಂತೆ ಗೊತ್ತಾಗುತ್ತದೆ. ಹೀಗೆ ಆಧುನಿಕ ಶಿಕ್ಷಣದ ಅಭಿವೃದ್ದಿಯಿಂದ ದಲಿತ ಸಮುದಾಯವು ಬದಲಾವಣೆಯನ್ನು ಹೊಂದುತ್ತಾ ಸಾಗುತ್ತಿದೆ.

ನಾವು ಸಮಾಜದ ಒಂದು ಭಾಗ ಎಂದು ತಿಳಿದು ಸವರ್ಣೀಯರು ವಿಧಿಸಿದ ಕಟ್ಟುಪಾಡುಗಳನ್ನು ತಿರಸ್ಕಾರದಿಂದ ನೋಡಲು ಆರಂಭಿಸಿದರು. ನಾವು ಕೂಡಾ ಮಾನವರೆಂದು ತಿಳಿದು ಅವರು ಸಾಮಾಜಿಕವಾಗಿ ನಡೆಸುತ್ತಿದ್ದ ಅತ್ಯಾಚಾರ, ಅಸ್ಪೃಶ್ಯತೆ, ಜಾತಿವ್ಯವಸ್ಥೆ, ಗೊಡ್ಡು ಸಂಪ್ರದಾಯ, ದೇವಸ್ಥಾನಗಳಿಗೆ ಸೇರಿಸದಿರುವುದು ಇನ್ನು ಮುಂತಾದ ಕಟ್ಟುಪಾಡುಗಳು, ಆಚರಣೆಗಳು, ವಿಧಿ-ವಿಧಾನಗಳ ವಿರುದ್ಧ ಸೆಟೆದು ನಿಂತು ತಮ್ಮಲ್ಲೂ ಸ್ವಾವಲಂಬಿಯಾಗಿ ಬದುಕುವ ಛಲವಿದೆ ಎಂಬ ವಿಶ್ವಾಸವನ್ನು ತೋರಿಸಲು ಪ್ರಾರಂಭಿಸಿದರು. ತಮ್ಮನ್ನು ಹೀನಾಯವಾಗಿ ಶೋಷಿಸಲು ತೊಡಗಿದ್ದ ಶೋಷಕರ ರೀತಿ

ನೀತಿಗಳನ್ನು ಸಿಟ್ಟು, ಆಕ್ರೋಶಗಳಿಂದ ಇತರ ಜನತೆಯಲ್ಲಿ ಹರಿವನ್ನು ಮೂಡಿಸುತ್ತಾ ತಮ್ಮದೇ ಆದ ರೀತಿಯಲ್ಲಿ ಪ್ರತಿಭಟನೆಯನ್ನು ತೋರುತ್ತಾ ಸಾಗಿದರು. ಹಾಗೆಯೇ ಮೇಲ್ಜಾತಿಯವರು ಹೇಗೆ ಮಾನವರು, ಹಾಗೆಯೇ ದಲಿತರು ಕೂಡಾ ಮಾನವರೆ ಎಂದು ಬಳಸುವ ಕವಿಯ ನುಡಿಗಳು ದಲಿತರನ್ನು ಎದೆತಟ್ಟಿ ನಿಲ್ಲುವಂತೆ ಪ್ರೇರೆಪಿಸುತ್ತದೆ. ಅಸ್ಪೃಶ್ಯತೆ, ಜಾತೀಯತೆ ನಮ್ಮ ಮನೆಯ ಮೂಲ ಬೇರುಗಳಿಂದ ಕುಡಿಯೊಡೆದು ಬರುತ್ತಿರುವಾಗ ಇದನ್ನು ಹೋಗಲಾಡಿಸುವುದು ಕಷ್ಟ ಆದರೆ ವಿದ್ಯಾವಂತ ಸಮುದಾಯದ ವೈಚಾರಿಕ ಚಿಂತನೆಗಳಿಂದ ಹೋಗಲಾಡಿಸಲು ಸಾಧ್ಯವಿದೆ ಎಂಬ ಅಭಿಪ್ರಾಯವನ್ನು ಕವಿ ವ್ಯಕ್ತ ಪಡಿಸುತ್ತಾರೆ.

**೨. ಆರ್ಥಿಕ ಪ್ರತಿಭಟನೆ:**

ದಲಿತರು ಸಾಮಾಜಿಕವಾಗಿ ಹೇಗೆ ತ್ಯಜಿಸಲ್ಪಟ್ಟಿದರೋ ಅದೇ ರೀತಿ ಆರ್ಥಿಕವಾಗಿಯೂ ದೌರ್ಜನ್ಯಕ್ಕೆ ಒಳಗಾಗಿದ್ದರು. ದಲಿತರು ಹುಟ್ಟಿನಿಂದಲೆ ಅಸ್ಪೃಶ್ಯತೆಯ ಕಳಂಕದಿಂದ ಅನೇಕ ಸೌಲಭ್ಯಗಳಿಂದ ವಂಚಿತರಾದವರು. ಯಾವ ತಪ್ಪು ಮಾಡಿಲ್ಲವಾದರೂ ನಿರಂತರವಾಗಿ ಶೋಷಿಸಲ್ಪಡುತ್ತಿದ್ದರು. ಬಡಕಲು ದೇಹ ಮತ್ತು ಹರಕಲು ಬಟ್ಟೆಯನ್ನು ಹುಟ್ಟವರು. ಗಂಡಸರು, ಹೆಂಗಸರು ಮತ್ತು ಮಕ್ಕಳಾದಿಯಾಗಿ ಎಲ್ಲರೂ ದುಡಿದು ಜೀವನವನ್ನು ಸಾಗಿಸುವ ಶ್ರಮಿಕ ವರ್ಗಕ್ಕೆ ಸೇರಿದವರು. ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ಕಷ್ಟಪಟ್ಟು ದುಡಿದರೂ ಸಿಕ್ಕುವ ಅಲ್ಪ ಕೂಲಿಯಿಂದಲೇ ತೃಪ್ತರಾಗುತ್ತಾರೆ. ದಲಿತರಿಂದ ಪುಕ್ಕಟೆಯಾಗಿಯೋ ಇಲ್ಲವೇ ಅತೀ ಕಡಿಮೆ ಕೂಲಿ ಕೊಟ್ಟೊ ದುಡಿಸಿಕೊಳ್ಳುವುದೇ ಹೆಚ್ಚು. ಭವ್ಯ ಬಂಗಲೆಗಳನ್ನು ಕಟ್ಟಿದ್ದರೂ ಇವರು ವಾಸ ಮಾಡುವುದು ಗುಡಿಸಿಲಿನಲ್ಲಿ, ದನದ ಕೊಟ್ಟಿಗೆಯಂತಹ ಊರಿನ ಕೊಳಗೇರಿಗಳಲ್ಲಿ ಆಕರ್ಷಕವಾದ ಗುಡಿ–ಗೋಪುರ ದೇವಸ್ಥಾನಗಳನ್ನು ನಿರ್ಮಿಸಿದರೂ ಅವರು ಪೂಜೆ ಮಾಡುವಂತಿಲ್ಲ. ಮರಗಳನ್ನು ಪೂಜಿಸುವರು, ಭೂಮಿಯನ್ನು ಅತೀ ಕಷ್ಟದಿಂದ ಉತ್ತು ಹಸನು ಮಾಡಿ, ಬಿತ್ತು ಹುಲುಸಾದ ಫಸಲನ್ನು ಬೆಳೆದರೂ ಅದು ಧಣಿಗಳ ಅಥವಾ ಮೇಲ್ವರ್ಗದವರು ಅದನ್ನು ಕಸಿದುಕೊಳ್ಳುತ್ತಾರೆ. ಅವರು ಶ್ರೀಮಂತರಾಗಿ ಕುಳಿತು ಸುಖ ಜೀವನ, ಐಶಾರಾಮಿ ಜೀವನ ನಡೆಸಲು ಕಾರಣರಾಗುತ್ತಾರೆ. ದಲಿತರು ಇಷ್ಟೆಲ್ಲಾ ಮಾಡಿದರೂ ಪ್ರತಿದಿನ ಒಂದು ತುತ್ತು ಅನ್ನಕ್ಕಾಗಿ ಅರಸಿಕೊಂಡು ಅಲೆಯುವುದು ಕಂಡುಬರುವುದಲ್ಲದೆ, ಅನೇಕ ಬಾರಿ ಉಪವಾಸ ಮಾಡಲೇಬೇಕಾಗುತ್ತದೆ.

ಆರ್ಥಿಕವಾಗಿ ದಲಿತರು ಪ್ರಬಲವಾಗಿರುವುದಿಲ್ಲ. ಒಂದು ಕೂಳಿಗೂ ಕಷ್ಟಪಡುವ ದಲಿತರು ಮನೆ, ಜಮೀನುಗಳನ್ನು ಹೊಂದಿರುವುದಿಲ್ಲ ಅವೆಲ್ಲಾ ಶ್ರೀಮಂತರ ವಶದಲ್ಲಿರುತ್ತವೆ. ಅವರುಗಳು ಜಮೀನುಗಳನ್ನ ಹೊಂದಿದ್ದರೂ ಅದರಲ್ಲಿ ಬೆಳೆ ಬೆಳೆಯಲು ಅವರಿಗೆ ಹಣ ಇರುವುದಿಲ್ಲ. ಹಬ್ಬ ಹರಿದಿನ, ಮದುವೆ ಕಾರ್ಯಗಳನ್ನು ಮಾಡಲು ಇವರು ಜಮೀನುಗಳನ್ನು ಅವರ ಮಕ್ಕಳನ್ನು ಜೀತಕ್ಕಿಟ್ಟು ಹಣವನ್ನು ಗೌಡರಿಂದಲೋ, ಮೇಲ್ವರ್ಗದ ಶ್ರೀಮಂತರಿಂದಲೋ, ಜಮೀನ್ದಾರರ ಹತ್ತಿರ ಸಾಲ ಮಾಡುತ್ತಾರೆ. ಸಾಲ ತೀರಿಸಲಾಗದವರು ಬಡ್ಡಿಯನ್ನು ಕಟ್ಟುವ ಸಾಮರ್ಥ್ಯವಿಲ್ಲದ ಇವರ ಸಾಲದ ಬಡ್ಡಿಗಾಗಿ ಅವರ

ಜಮೀನು, ದನ ಕರುಗಳನ್ನು ಅಥವಾ ತಮ್ಮ ಮಕ್ಕಳನ್ನು ಅಡವಿಡುತ್ತಾರೆ. ಅದು ಒಂದೇ ತಲೆಮಾರಿಗೆ ಮುಗಿಯದೆ ಮಕ್ಕಳು ಮೊಮ್ಮಕ್ಕಳ ಕಾಲಕ್ಕೂ ಬಡ್ಡಿಗಾಗಿ ಅನಿವಾರ್ಯವಾಗಿ ಜೀತದಾಳುಗಳಾಗಿ ದುಡಿಯುವ ದುಸ್ಥಿತಿ ನಿರ್ಮಾಣವಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ದಲಿತರನ್ನು ಪ್ರಾಣಿಗಳಿಗಿಂತಲೂ ಕೀಳಾಗಿ ಕಾಣಿಸಿಕೊಂಡು, ದೌರ್ಜನ್ಯಕ್ಕೆ ಗುರಿಯಾಗಿ ಕೆಳಮಟ್ಟದ ಜೀವನ ನಡೆಸುವ ಪರಿಸ್ಥಿತಿ ನಿರ್ಮಾಣವಾಗುತ್ತಿತ್ತು. ಈ ಮೇಲಿನ ಅಂಶಗಳೆಲ್ಲ 'ಹೀಗೊಂದು ಬದುಕು' 'ಹೀಗೊಂದು ಬವಣೆ', 'ಹಣೆಬರಹ' ಎಂಬ ಕವಿತೆಯಲ್ಲಿ ಕಂಡುಬರುತ್ತದೆ. ಇಂತಹ ಒಂದು ಸ್ಥಿತಿಯನ್ನು ಕವಿ ಪ್ರತಿಭಟಿಸಬೇಕೆಂದು ಸಮಾಜದಲ್ಲಿ ಜನರಿಗೆ ಸಂದೇಶ ನೀಡುತ್ತಿದ್ದಾರೆ. ಇಂತಹ ದಲಿತರನ್ನು ಕವಿಯು 'ನನ್ನ ಹತ್ತಿರದ ಬಂಧುಗಳು' ಎಂದೇ ಸಂಬೋಧಿಸುತ್ತಾರೆ.

ಮುಟ್ಟಬಾರದ ಜನ

ಮುಟ್ಟಲಾಗದ ಜನ

ತಾವಾಗಿಯೇ ಮುಟ್ಟಿಸಿಕೊಳ್ಳುವ ಮುಗ್ಧ ಜನ

ಮತ್ತೆ ಹುಟ್ಟದ ಜನ

ನನ್ನ ಹತ್ತಿರದ ಬಂಧುಗಳು.[೪]

'ನಾ ಮಾಡುವ ಶಬ್ದ' ಹಾಗೆಯೇ ಚಿನ್ನಸ್ವಾಮಿಯವರ ಮತ್ತೊಂದು ಕವಿತೆ ಅಂಬೇಡ್ಕರ್ ರವರ ಗುಂಗಿನಲ್ಲಿ ನಿರೂಪಣೆಗೊಂಡಿದೆ.

ನಾ ಮಾಡುವ ಶಬ್ದ

ಕೇಳುವುದಿಲ್ಲ ಕಿವಿಗೆ

ರಾಚುತ್ತದೆ

ಸಂಗೀತದಂತೆ

ಕದ ತಟ್ಟಿ ಮೀಟುವುದಿಲ್ಲ

ಎದೆ ತಂತಿಯ ಜ್ವಾಲಾಮುಖಿಯಂತೆ

ಬೆಂಕಿಯೊಡನೆ ಸವಾರಿ ಮಾಡಿ

ಕಾಡ್ಗಿಚ್ಚು ಹೊತ್ತಿಸುತ್ತದೆ.

ನಾ ಮಾಡುವ ಶಬ್ದ

ಸುಳಿ ಮಿಂಚಾಗಿ ಕಣ್ತಾನಿಸುವುದಿಲ್ಲ

ಗುಡುಗಾಗಿ ಬರ

ಸಿಡಿಲಾಗಿ

ಸೀಳುತ್ತದೆ

ಮಾನವೀಯವಲ್ಲದ ಎಲ್ಲಾ

ವ್ಯವಸ್ಥೆಗಳನ್ನ

ಅವಸ್ಥೆಗಳನ್ನ[೫]

ಈ ಮೇಲಿನ ಕವಿತೆ ಸಾಲುಗಳಲ್ಲಿ ದಲಿತ ಧ್ವನಿಗಳು ಕ್ರಾಂತಿಯ ಮೂಲಕ ಹೊಸ ಅಲೆಯ ಬೀಸಿ ಇರುವಂತಹ ಅವಸ್ಥೆಗಳನ್ನು ನಾಶ ಮಾಡಿ ಒಂದು ಹೊಸ ಸಮಾಜ ಸೃಷ್ಠಿಯಾಗ ಬೇಕಾಗಿದೆ ಎಂದು ತಿಳಿಸುವ ನಿಟ್ಟಿನಲ್ಲಿ ರಚನೆಗೊಂಡಿದೆ.

ಚಿನ್ನಸ್ವಾಮಿಯವರ 'ಕಡ ಬಡ' ಕವಿತೆಯು ಬಹಳ ಒಳ್ಳೆಯ ಕವಿತೆ. ಈ ಕವಿತೆಯ ಕೊನೆಯಲ್ಲಿ ಅಜ್ಜ ಹೇಳುವ 'ನಮ್ಮ ಬಯಕೆ ಕಡ ಬೆ ಅಡ' ಇವತ್ತಿನ ಜಾಗತೀಕರಣದ ಸಂದರ್ಭದಲ್ಲಿ ನಮ್ಮೆಲ್ಲರ ಬದುಕಿನ ಸ್ಥಿತಿ ಕೂಡ ಹೀಗೆಯೇ ಆಗಿದೆ. ಮತ್ತೆ ಅಜ್ಜ ಮುಂದುವರೆದು ಹೇಳುತ್ತಾನೆ ಅದನ್ನು ಮೀರಿದವು 'ಕಡಿ ಬಡಿ ಹೊಡಿ' ಅಸ್ಪೃಶ್ಯತೆಯ ನೋವಿನಲ್ಲಿ ಬದುಕುತ್ತಿರುವವರು ಎದ್ದರೆ ಕಡ ಬಡ ಅಡ ಅದಕ್ಕೆ ವ್ಯತಿರಿಕ್ತವಾಗಿ ಕಡಿ ಬಡಿ ಹೊಡಿ. ಇಂತಹ ಪ್ರತಿಭಟನೆಗಳು ಇವರಲ್ಲಿ ಬಹುತೇಕ ಕಂಡುಬರುತ್ತವೆ.[೬]

**೩. ಸಾಂಸ್ಕೃತಿಕ ಪ್ರತಿಭಟನೆ:**

ಚಿನ್ನಸ್ವಾಮಿಯವರು ದಲಿತತ್ವದ ನೋವನ್ನು ಮೆಲುದನಿಯಲ್ಲಿ ಅಭಿವ್ಯಕ್ತಿಸಿದರೂ ಅದಕ್ಕೆ ವಿರೋಧವಾಗಿ ಸಾಂಸ್ಕೃತಿಕ ಪ್ರತಿಭಟನೆಯನ್ನು ಮಾಡುವಂತಹ ಕೆಲವು ಕವಿತೆಯನ್ನು ರಚನೆ ಮಾಡಿರುವಂತಹದ್ದು ಅವರ ಸೃಜನಾತ್ಮಕ ಪ್ರತಿಭೆಗೆ ಒಂದು ವರದಾನ ಎಂಬಂತೆ ಓದುಗರಿಗೆ ಗೋಚರವಾಗುತ್ತದೆ. ಸಾಮಾನ್ಯವಾಗಿ ಪ್ರತಿಭಟನೆಯನ್ನು ವ್ಯವಸ್ಥೆಯ ವಿರುದ್ಧವೆಂದು ಗ್ರಹಿಸಲಾಗಿದೆ. ಅದು ವ್ಯವಸ್ಥೆಯೊಂದರ ಪರ್ಯಾಯ ಕ್ರಮವೂ ಹೌದು ಎಂಬ ಸಂಗತಿ 'ಹಾದಿ' ಎನ್ನುವ

ಅವರ ಕವಿತೆಯಲ್ಲಿ ವ್ಯಕ್ತವಾಗಿದೆ. ಈ ಬಗೆಯ ಪರ್ಯಾಯವನ್ನೇ ಕವಿ ಬಂಡಾಯವೆಂದು ಕರೆಯುತ್ತಾರೆ. ಆ ಬಂಡಾಯ ಮತ್ತೊಂದು ಹಾದಿಯನ್ನು ಹುಡುಕಲು ಪ್ರಯತ್ನಿಸಿದೆ. ಈ ಹುಡುಕುವ ಪರಿಯನ್ನೆ ಅವರು ಹಾದಿಯಿಂದ ತಿಳಿಯುತ್ತಾರೆ.

'ಹಾದಿ ಹುಡುಕಿ'

ಬುದ್ಧಿ ಬೆಳಕಿಂಡಿಯ

ಬುಡದಡಿಯಲೆಲ್ಲೋ

ಹುದುಗಿಹುದೆಂದು

ಹಲುಬಿದರು ಗುರುಕಲಶ್ರೇಷ್ಠರು

ಎಲುಬುಗಳಾದರು

ದೃಷ್ಟಿಗೆ ದಕ್ಕಲೇ ಇಲ್ಲ ಅದು

ಬೆಳಕು ಹಾಯದ ಹಾದಿ

ಬಂಡಾಯವಲ್ಲದೆ

ಮತ್ತೇನು

– ಹಾದಿ

ಬಂಡಾಯ ಪಂಥವನ್ನು ವಿರೋಧಿಸುವವರಿಗೆ ಇದೊಂದು ನೋಟೀಸ್ ಎನ್ನುವಂತಿದೆ. ವ್ಯವಸ್ಥೆಯನ್ನು ವಿರೋಧಿಸುವುದೇ ಬಂಡಾಯವೆಂದು ತಿಳಿಯುವ ಬದಲಾಗಿ ವ್ಯವಸ್ಥೆಯ ಒಳಗೇ ಇರುವ ದೋಷಗಳನ್ನು ತಿಳಿಯುವುದು ಬಂಡಾಯವೆಂದು ಗ್ರಹಿಸುವ ಅಗತ್ಯವಿದೆ. ದಲಿತರು ಅಸ್ಪೃಶ್ಯರ, ಬಡವರು, ಕೂಲಿಕಾರರು, ರೋಗಿಗಳು, ದೇವ ದಾಸಿಯರು, ಮಹಿಳೆಯರು ಈ ನಾಗರೀಕತೆಯ ಸೃಷ್ಟಿಗರು 'ಅಸ್ಪೃಶ್ಯರು' ಕವಿತೆಯಲ್ಲಿ ಅಸ್ಪೃಶ್ಯರ ಬಗ್ಗೆ ಬರೆಯುತ್ತಾ ನಾಗರೀಕತೆಯ ವಿಲಕ್ಷಣವನ್ನು ಮಂದಿಡುತ್ತಾರೆ.

ನಾವು

ಭೂಮಿತಾಯಿಯ ಹಾದರದ ಮಕ್ಕಳು

ನಮ್ಮ ವಿದ್ವತ್ತು ರಿಯಾಯಿತಿಯಿಂದ ಬಂದದ್ದು

ನಮ್ಮ ಪ್ರತಿಭೆ ದ್ವಿತೀಯ ದರ್ಜೆಯದು
ಈ ಅಸಮ ವ್ಯಂಗ್ಯ, ಕುಹಕಗಳ ನಡುನಡುವೆಯೇ
ಸೋಲೊಪ್ಪದೆ ನೆಡೆದಾಡುವ ನಾವು
ನಾಗರೀಕತೆಯ ಅಪವಾದಗಳು

– ಅಸ್ಪೃಶ್ಯರು

ನಾಗರೀಕತೆ ಮತ್ತು ರಾಜಕಾರಣ ಸೃಷ್ಟಿಸುತ್ತಿರುವ ವ್ಯಂಗ್ಯವನ್ನು ಅಸ್ಪೃಶ್ಯರು ಕವಿತೆ ಸಂಪೂರ್ಣವಾಗಿ ಅಭಿವ್ಯಕ್ತಿಸುತ್ತದೆ. ದಲಿತರ ಅಮಾನವೀಯ ಸ್ಥಿತಿಗೆ ಅಸ್ಪೃಶ್ಯರೆಂಬ ತಲೆ ಬರಹವು ಕಾರಣವಾಗಿದೆ. ಈ ತಲೆ ಮತ್ತು ಹಣೆ ಬರಹದಿಂದಾಗಿಯೇ ಅಸ್ಪೃಶ್ಯ ಗೆದ್ದಲು ಹುಳುವಿನ ಹಾಗೆ ಬದುಕುತ್ತಿದ್ದಾನೆ. ಅವರ ಗೆದ್ದಲು ಹುಳುಗಳು ಕವಿತೆಯಲ್ಲಿ ಅಸ್ಪೃಶ್ಯನ ಈ ಸ್ಥಿತಿಗೆ ಕಾರಣವಾಗಿರುವ ಭಾರತೀಯ ಸಂಸ್ಕೃತಿಯ ಬಗ್ಗೆ ಹೇಳುತ್ತಾರೆ. ಭಾರತೀಯ ಸಂಸ್ಕೃತಿಯನ್ನು ಸಾಂಸ್ಕೃತಿಕ ರಾಷ್ಟ್ರೀಯತೆಯ ಮೂಲಕ ಉದಾತ್ತೀಕರಿಸುವ ಮಾದರಿಗಳು ಈ ಸಂಸ್ಕೃತಿಯ ಒಳಗೆ ಇರುವ, ಅಸಮಾನತೆಯನ್ನು ಲೆಕ್ಕಿಸದೆ ಹೋಗಿದ್ದರಿಂದ ವಿಕೃತ ದಲಿತರ ಗೆದ್ದಲುತನವನ್ನು ನಿರ್ಧರಿಸುತ್ತಾರೆ.

ಪುರಾತನ ಧರ್ಮವೊಂದು
ಮಹಾವೃಕ್ಷ
ಬ್ರಾಹ್ಮಣರೆ ಬೇರು
ಕ್ಷತ್ರಿಯ ಕಾಂಡ
ವೈಶ್ಯ ಶೂದ್ರಾದಿಗಳು
ಟೊಂಗೆ ಕೊಂಗೆಗಳು
ವೃಕ್ಷಕ್ಕೆ ಸಂಬಂಧಪಡದ
ಮತ್ತೂ ಅಲ್ಲೇ ಇರಬೇಕಾದ
ಗೆದ್ದಲು ಹುಳುಗಳು
ಅಸ್ಪೃಶ್ಯರು

– ಗೆದ್ದಲು ಹುಳುಗಳು

ವ್ಯವಸ್ಥೆಗೆ ಸಂಬಂಧ ಪಡದ ಬೇರುಗಳಿಂದಲೇ ಕ್ರಾಂತಿಯ ಜ್ವಾಲೆಗಳೇಳುತ್ತವೆ ಎನ್ನುವುದಕ್ಕೆ ಇಲ್ಲಿನ ಗೆದ್ದಲು ಹುಳುಗಳು ಕವಿತೆ ಸಾಕ್ಷಿ. ಭಾರತೀಯ ಆದರ್ಶೀಕೃತ ಸಂಸ್ಕೃತಿಯಲ್ಲಿ ಯಾವುದಕ್ಕೂ ಸಂಬಂಧಪಡದ ಅಸ್ಪೃಶ್ಯರು ಅಂತಹ ವಿಕೃತಿಯಿಂದಲೇ ಕ್ರಾಂತಿಯ ಸ್ಫೂರ್ತಿ ಪಡೆಯುತ್ತಾರೆ. ನಿಕೃಷ್ಟ ಅರ್ಥದಲ್ಲಿ ಬಳಕೆಯಾದ ಗೆದ್ದಲು ಬ್ರಹ್ಮಾಂಡದಂತಹ ಮಹಾ ವೃಕ್ಷವನ್ನೇ ನೆಲಕ್ಕುರುಳಿಸಬಲ್ಲ ಶಕ್ತಿ ಪಡೆದಿರುತ್ತದೆ. ಭಾರತೀಯ ಸಂಸ್ಕೃತಿ ಎಂಬ ಮಹಾ ವೃಕ್ಷವನ್ನು ಈ ಅಸ್ಪೃಶ್ಯ ಗೆದ್ದಲು ಹುಳದಂತೆ ನೆಲಕ್ಕುರುಳಿಸುವ ಶಕ್ತಿ ಪಡೆದಿದ್ದಾನೆ.

ಸ್ವಾಭಿಮಾನ, ಆತ್ಮ ಗೌರವ, ಪ್ರತಿಷ್ಠೆ ಮತ್ತು ತನ್ನತನದ ಮೇಲೆಯೇ ಹಲ್ಲೆ ಮಾಡುವ ಧರ್ಮಗಳನ್ನೂ ನಿರಾಕರಿಸುವ ಮೂಲಕ ಉದಾತ್ತ ಸಂಸ್ಕೃತಿಯ ವಿರುದ್ಧ ಕವಿ ಸಮರ ಸಾರುತ್ತಾರೆ.

ಈ ಹುಸಿಯಾದ ವ್ಯಕ್ತಿತ್ವ

ಇಂತಹ ದಮನೀಯ ಅಸ್ಥಿತ್ವ

ನನಗೆ ಬೇಡವೇ ಬೇಡ

– ನನ್ನ ಅಸ್ಪೃಶ್ಯ ಮಾಡಿದ

ಎಂದು ಸಂಸ್ಕೃತಿಯ ಮುಖ್ಯವಾಹಿನಿಯನ್ನು ಕಟುವಾಗಿ ವಿರೋಧಿಸುತ್ತಾರೆ ಆದರೂ ಅಮರಿಕೊಳ್ಳಬೇಕಾದ ಕೊಂಡಿಗಳೆಂದು ಇದೇ ಸಂಸ್ಕೃತಿಯನ್ನ ಅಪ್ಪಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿಸುತ್ತಾರೆ.

ಒಟ್ಟಿನಲ್ಲಿ ಚಿನ್ನಸ್ವಾಮಿಯವರಲ್ಲಿ ಪ್ರತಿಭಟನೆಯ ಪ್ರವೃತ್ತಿಯಿದ್ದು ಅವರು ಈ ಲೋಕವನ್ನು ಗ್ರಹಿಸುವ ರೀತಿ ಬುದ್ಧಿ ಪ್ರಧಾನವಾದದ್ದು ಎಂದು ಹೇಳಿರುವುದು ಮಹತ್ವದ ಸಂಗತಿ.

### ೪. ಧಾರ್ಮಿಕ ಪ್ರತಿಭಟನೆ:

ಪ್ರತಿಭಟನೆ ಎಂಬುದು ಹಲವು ನೆಲೆಯಲ್ಲಿ ಕಂಡುಬರುತ್ತದೆ. ಅದರಲ್ಲಿ ಧಾರ್ಮಿಕ ಪ್ರತಿಭಟನೆಯೂ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಚಿನ್ನಸ್ವಾಮಿಯವರ 'ಚಪ್ಪಲಿ ಮತ್ತು ನಾನು' ಎಂಬ ಕವಿತೆಯಲ್ಲಿ ಈ ತರಹದ ಪ್ರತಿಭಟನೆ ಕಂಡುಬರುತ್ತದೆ. ಚರಿತ್ರೆಯಲ್ಲಿ ದೇವಾಲಯ ಪ್ರವೇಶಕ್ಕಿಂತ ದೇವಾಲಯದ ನಿರಾಕರಣೆಯೆ ಹೆಚ್ಚು ಕ್ರಾಂತಿಕಾರಕವಾದದ್ದೆಂದು ೧೨ನೆ ಶತಮಾನದಲ್ಲಿ ವಚನಕಾರರೆ ತೋರಿಸಿಕೊಟ್ಟಿದ್ದಾರೆ. ದೇವಾಲಯಗಳ ನೆಪದಲ್ಲಿ ಹುಟ್ಟಿಕೊಂಡಿರುವ ಆಧುನಿಕ ವಾದಗಳನ್ನು ಚರ್ಚಿಸುತ್ತ ಕುವೆಂಪು ಅವರ ಸಂದೇಶವನ್ನು ಸೂಚ್ಯವಾಗಿ ಹೇಳುವಂತಿದೆ. ಈವರೆಗೂ ಪ್ರತಿಭಟನೆಯನ್ನು ವಾಚ್ಯವಾಗಿ

ನೇರವಾಗಿ ಅಭಿವ್ಯಕ್ತಿಸಿದ ಸ್ವಾಮಿಯವರ ತಮ್ಮ ಎರಡು ಸಂಕಲನಗಳ ಮೂಲಕ ಅದರ ಸಾಂಸ್ಕೃತಿಕ ಮುಖವನ್ನು ಅನಾವರಣಗೊಳಿಸುತ್ತಾರೆ. ಚಪ್ಪಲಿ ಮತ್ತು ನಾನು ಶರಣರ ದೇವಾಲಯ ನಿರಾಕರಣೆಯ ಕಲ್ಪನೆಯನ್ನು ಸಾಂಸ್ಕೃತಿಕ ವೈರುಧ್ಯಗಳ ಮೂಲಕ ಪ್ರವೇಶಿಸುವ ಕವಿತೆಯಾಗಿದೆ. ಕುರ್ತಕೋಟಿಯವರು ಹೇಳುವಂತೆ ನೈತಿಕತೆ ಮತ್ತು ಕಲೆ ಎರಡು ಒಂದಾಗುವ ಗುಣವನ್ನು ಈ ಕವಿತೆ ಪಡೆದಿದೆ.

ಬತ್ತಿದ ಕೆರೆಯ ನೀರುಗುಣಿಗೆ

ಗೋಣ ಅನಿಸುವ ಕೊಕ್ಕರೆಯಂತೆ

ನಾನು ಮುಂಗಾಲ

ತುದಿ ಬೆರಳುಗಳ ಮೇಲೆ

ನಿಂತು ಇಣುಕಿ ದೇವರ ರೂಪವನ್ನು

ಕಂಡಷ್ಟು ಕುದಿಯುತ್ತೇನೆ

ನಿತ್ಯ ಹಜಾರದಲ್ಲಿ ನಿಂತು

ಗೋಣ ಆನಿಸಿ ಇಣುಕಿ

ಪುನೀತನಾಗುವ ನನ್ನ ಆತ್ಮ

ದೇವರ ಬಳಿ ಒಳಗೆ

– ಚಪ್ಪಲಿ ಮತ್ತು ನಾನು

ಬಸವಣ್ಣ ಮೊದಲ್ಗೊಂಡು ಇಡೀ ಶರಣ ಸಮುದಾಯವೆ ಭೌತಿಕ ದೇವಾಲಯವನ್ನು ನಿರಾಕರಿಸುವ ಬಗೆ ಕೊನೆಯ ಸಾಲುಗಳಲ್ಲಿ ವ್ಯಕ್ತವಾಗಿದೆ. ಈ ಸಮಾಜವನ್ನು ನಿರಂತರವಾಗಿ ಮುಳ್ಳುಗಳಂತೆ ಕೊರೆಯುತ್ತಿರುವ ಪುರೋಹಿತಶಾಹಿ ಮನಸ್ಸು ಹೇಗೆ ದೇವಾಲಯದ ಹೊರಗೆ ಮತ್ತು ದೇವಾಲಯದ ಹೊರಗಿರುವ ದಲಿತ ದೇವರ ಆತ್ಮದ ಒಳಗಿದ್ದಾನೆ ಎನ್ನುವ ಸಂಗತಿ ಧಾರ್ಮಿಕ ಪ್ರತಿಭಟನೆಯ ಪ್ರತೀಕವಾಗಿದೆ. ಚಪ್ಪಲಿಗಳನ್ನು ಮೆಟ್ಟಿರುವ ಎಲ್ಲಾ ಕಾಲುಗಳನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ಆ ದೇವರನ್ನು ಕಾಣುವ ಈ ನಾಯಕ ವ್ಯರ್ಥವಾದ ದೇವರ ಪೂಜೆಯನ್ನು ಕಂಡು ಕುಸಿಯತೊಡಗಿದ, ನೆಲವನ್ನು ಕಲ್ಪಿಸಿಕೊಳ್ಳುತ್ತಿದ್ದಾನೆ. ಇದು ನಾಯಕನ ಒಂದು ಬಗೆಯ ಒಳತೋಟಿಯ ಕ್ರಾಂತಿ ಬಸವಣ್ಣ ತನ್ನ ತಲೆಯ ಮೇಲೆ ಹರಳಯ್ಯನ ಚಪ್ಪಲಿಗಳನ್ನು ಹೊತ್ತುಕೊಂಡು ತಿರುಗಾಡಿದ ಕ್ರಾಂತಿ ಇದಲ್ಲ. ಆದರೆ ಚಮ್ಮಾರನೆ ತನ್ನ ಕಾಲದಲ್ಲಿ ಚಪ್ಪಲಿ ತೊಟ್ಟು ದೇವರನ್ನು ಕಾಣಲು ಹೊರಟ ಕ್ರಾಂತಿ. ಇದು ಕನಕ ಕೃಷ್ಣನನ್ನು ಕಂಡ ಪರಿ,

ನೆಲ ಕುಸಿಯದೆ ದೇವನ ಪೂಜೆ ವ್ಯರ್ಥವಾಗದೆ ದೇವರು ದಲಿತ-ಶೂದ್ರರೆಡೆಗೆ ಬರಬೇಕುಂಬುವುದು ಕವಿಯ ಕಳಕಳಿ ಅನುಭಾವಿಕ ನೆಲೆಯ ಮೂಲಕ ಸಿದ್ದ ರಚನೆಗಳನ್ನು ನಿರಾಕರಿಸುವುದು ಚೆನ್ನಸ್ವಾಮಿಯವರ ಪ್ರತಿಭಟನೆಯ ಒಂದು ಮಾದರಿ. 'ಚಪ್ಪಲಿ ಮತ್ತು ನಾನು' ಸಂಕಲನದ ಅಳುವ ಬುದ್ದ, ಜೇನ್ಗುಯಿ ತಂಕಾ ದೇವಾಲಯದ ಕಟ್ಟಿಗೆ ಮೂರ್ತಿಯನ್ನು ಸುಟ್ಟು ಚಿತಾ ಭಸ್ಮ ಹುಡುಕುವ ಸಂದರ್ಭದ ಕವಿತೆ. ಮಿಲರೇಪನಿಗೊಂದು ಮೊರೆ, ಶಿವನ ಪ್ರಕಾಶ ಮುಂತಾದ ಕವಿತೆಗಳು ಬುದ್ದನ ಸಹಾನುಭೂತಿಯಂತೆ ಈ ವ್ಯವಸ್ಥೆಗೆ ಪ್ರತಿಕ್ರಿಯಿಸುತ್ತಾರೆ.

ಹತ್ತಾರು ತಲೆಗಳ ನಡುವೆ

ಹೊಳೆಯುವ ಮುಕುಟ ಮಣಿ

ಮೆತ್ತನೆಯ ಹಾಸಾಗಿ ಬೆಳೆದು

ಛತ್ರಿಯಾಗುವ ಫಣಿ

ಒಮ್ಮೆ ವಜ್ರಖಚಿತ ಕಿರೀಟ

ಕಂಠೀಯಾರ ಜನಿವಾರ

– ಚಪ್ಪಲಿ ಮತ್ತು ನಾನು

ಈ ಸಾಲುಗಳಲ್ಲಿ ದೇವರ ಕಿರೀಟ, ಹಾರ, ಜನಿವಾರಗಳು ಅವನ ಮೈಯನ್ನು ಉರಿಸುತ್ತದೆ. ಇಂತಹ ದೇವರ ದರ್ಶನದಲ್ಲಿ ಪವಿತ್ರವಾದದ್ದು ಏನೂ ಇಲ್ಲ. ಅದರ ಬದಲಾಗಿ ಅಲ್ಲಿ ಬಂಡವಾಳಶಾಹಿಯ ಐಶ್ವರ್ಯವಿದೆ. ಚಪ್ಪಲಿ, ಕಿರೀಟ, ಹಾರ ಜನಿವಾರ ಇದೆಲ್ಲ ಒಂದು ಸಂಜ್ಞೆಗಳು ಅವುಗಳ ವ್ಯಾವಹಾರಿಕ ಅರ್ಥವು ಕವಿತೆಯ ಸೃಜನ ವ್ಯಾಪಾರದ ಕುಡಿತದಲ್ಲಿ ಬೇರೆ ಅರ್ಥಗಳನ್ನು ಪಡೆಯತೊಡಗುತ್ತದೆ. ದೇವರ ಸುತ್ತ ಪ್ರದಕ್ಷಿಣೆ ಹಾಕುವವರ 'ಗತಿ' ನಿಂತ ನೀರಿನ ಸ್ಥಿತಿಯಾಗುತ್ತದೆ. ಅದಕ್ಕೆ ಪ್ರತಿಯಾಗಿ ಗರುಡಗಂಭದ ಹತ್ತಿರ ಸುಮ್ಮನೆ ನಿಂತವನ ಸ್ಥಿತಿ ಅದ್ಭುತವಾದ ಗತಿಯಾಗುತ್ತದೆ. ಗರ್ಭಗುಡಿಯಲ್ಲಿ ಪ್ರದಕ್ಷಿಣೆ ಹಾಕುವವರ ಆತ್ಮ ಕಳಚಿಟ್ಟ ಚಪ್ಪಲಿಗಳ ಸುತ್ತ ಪ್ರದಕ್ಷಿಣೆ ಹಾಕುತ್ತದೆ.

ಗರುಡಗಂಭದ ಆಸರೆಗೆ ನಿಂತ ನಾಯಕನ ಆತ್ಮ ದೇವರ ಬಳಿ ಹೋದವರು ಹೊರಗೆ ಬಂದು ವಿಪರೀತವಾದ ಪರಿಣಾಮವಾಗುತ್ತದೆ. ಕವಿತೆಯಲ್ಲಿಯ ಸಂಜ್ಞೆಗಳು ರೂಢವಾದ ಅರ್ಥವನ್ನು ಪಡೆಯುತ್ತವೆ. ಇದು ಒಂದು ಮಹತ್ವದ ಕ್ರಾಂತಿ ಒಳಗಣ್ಣಿಗೆ ಮಾತ್ರ ಕಾಣುವ ಕ್ರಾಂತಿ ಕಾವ್ಯ ಮಾಡಬೇಕಾದುದ್ದು ಬಹುಶಃ ಇದನ್ನೆ ಎಂದು ಕಾಣುತ್ತದೆ. ಇದಕ್ಕಾಗಿ ವಾಸ್ತವ ಅನುಭವವನ್ನು ಬಲಿಕೊಡಬೇಕಾಗಿಲ್ಲ. ದೇವರ ವ್ಯರ್ಥವಾದ ಪೂಜೆ ನಡೆದಾಗ ನಾಯಕನ ಕಾಲಲ್ಲಿಯ ಚರ್ಮದ ಚಪ್ಪಲಿಗಳು ಕಾದ ಕಬ್ಬಿಣವಾಗಿ ನೆಲ ಕುಸಿಯತೊಡಗಿ ಹಸಿ ಒಡಲು ಉರಿಹತ್ತಿ ಬೆರೆಯುತ್ತದೆ. ಇದೂ ಒಳಗಣ್ಣಿಗೆ ಮಾತ್ರ

ಕಾಣುವ ಕ್ರಾಂತಿ-ನಾಯಕ ಮಾತ್ರ ನಿಂತಲ್ಲೇ ನಿಂತೇ ಇದ್ದಾನೆ. ಕಲೆ ಮತ್ತು ನೀತಿ ಈ ಗತಿ ಸ್ಥಿತಿಗಳ ಕ್ಷಣದಲ್ಲಿ ಒಂದಾಗಿ ಬಿಡುತ್ತದೆ. ಕಲೆಯ ಅಂತರಂಗದಲ್ಲಿ ನಡೆದಿರುವ ಕ್ರಾಂತಿಯನ್ನು ಈ ಕವಿತೆ ನಿರೂಪಿಸುತ್ತದೆ. ಬಂಡಾಯದ ರೋಷ ಕಾವ್ಯದಲ್ಲಿ ಪಡೆಯುವ ಸಮಾಧಾನ ಇದರಲ್ಲೇ ಕಾವ್ಯದ ಸಮಾಧಾನ ಬಂಡಾಯದ ರೋಷವನ್ನು ಕಲಾತ್ಮಕವಾಗಿ ನಿರ್ಮಾಣ ಮಾಡುತ್ತದೆ.

'ನಾನೊಂದು ಮರವಾಗಿದ್ದರೆ' ಕವಿತೆಯಲ್ಲಿ ತೀವ್ರ ಆಕ್ರೋಶದಿಂದ ದಲಿತನ ನೋವುಗಳನ್ನು ಬರೆದ ಕವಿ ಮರದ ಮೂಲಕ ನೆಲದ ಕುಲವನ್ನು ನೆಲವನ್ನಪ್ಪಿಕೊಂಡಿರುವ ದಲಿತನ ಕುಲವನ್ನು ಅತ್ಯಂತ ಮಧುರವಾಗಿ ಬರೆಯುತ್ತಾರೆ. ಮರ, ನೆಲ, ಹಕ್ಕಿಗೂಡು, ಮಳೆಗಿಲ್ಲದ ಕುಲಪ್ರಜ್ಞೆ ಈ ಮನುಷ್ಯನಿಗೇಕೆ ಕಾಡುತ್ತದೆಂದು ನೊಂದುಕೊಳ್ಳುತ್ತಾರೆ.

ಚಿನ್ನಸ್ವಾಮಿಯವರು ಗೋವು, ಮರ, ಮಡಿಗಳನ್ನು ಜಾತಿ ಮತ್ತು ಪ್ರಕೃತಿಯೊಂದಿಗೆ ಹೋಲಿಸಿ ಬರೆಯುತ್ತಾರೆ. ಈ ಕ್ರಾಂತಿ ಕವಿ ರೋಮ್ಯಾಂಟಿಕ್ಕಾದ ಇಲ್ಲಿನ ಕವಿತೆಗಳ ಮುಖಾಂತರ ಬೊಗಸೆಯಲ್ಲಿ ಚಂದ್ರನನ್ನು ಹಿಡಿದು ಸಮುದ್ರಚುಂಬನ ಮಾಡುತ್ತಾರೆ. ಆದರೆ ಎಲ್ಲಿಯೂ ರೊಮ್ಯಾಂಟಿಕನ್ನು ಕ್ರೂರ ವ್ಯವಸ್ಥೆಯಿಂದಾಚೆ ಆದರ್ಶೀಕರಿಸುವುದಿಲ್ಲ ಎಂಬುವುದೇ ಮುಖ್ಯವಾದ ವಿಷಯ ಸಮಾಜವನ್ನು ಅದರ ಎಲ್ಲಾ ಕ್ರೂರತೆಗಳೊಂದಿಗೆ ಪ್ರೀತಿಸುತ್ತಲೆ ಖಾರವಾಗಿ ಸಂಬಂಧವನ್ನು ಹೊಂದಿದ್ದಾರೆ. ಈ ಚೈತನ್ಯದಿಂದಲೇ ಅವರ ಕವಿತ್ರ ಮತ್ತು ಕ್ರಾಂತಿತನ ಎರಡೂ ಲಯ ಕಳೆದುಕೊಳ್ಳದೆ ತುಂಬು ಜೀವಂತಿಕೆಯಿಂದ ಕೂಡಿವೆ.

'ನನ್ನ ಅಸ್ಪೃಶ್ಯನ ಮಾಡಿದ' ಎನ್ನುವ ಕವಿತೆಯಲ್ಲಿ ಧರ್ಮದ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸಿರುವುದು ಈ ಕೆಳಗಿನ ಸಾಲುಗಳಲ್ಲಿ ಗೋಚರವಾಗುತ್ತದೆ.

ನನ್ನ ಸ್ವಾಭಿಮಾನವನ್ನು
ಹತ್ತಿಕ್ಕುವ ಧರ್ಮ ನನಗೆ ಬೇಡ
ನನ್ನ ಆತ್ಮ ಗೌರವದ ಮೇಲೆ
ಹಲ್ಲೆ ನಡೆಸುವ ಧರ್ಮ ನನಗೆ ಬೇಡ
ನನ್ನ ಪ್ರತಿಷ್ಠೆಯನ್ನು ಕುಗ್ಗಿಸುವ ಧರ್ಮ ನನಗೆ ಬೇಡ
ನನ್ನ ತನವನ್ನು ಹೀಯಾಳಿಸುವ ಧರ್ಮ ನನಗೆ ಬೇಡ
ಘನತೆ ಗಯ್ಯಾಳಿಗೇ ಹಿರಿದು

ಮಾನ್ಯತೆ ಮಡಿವಾಳನಿಗಿಂತ ಕಮ್ಮಿ

ಈ ಹುಸಿಯಾದ ವ್ಯಕ್ತಿತ್ವ

ಇಂಥ ದಯನೀಯ ಅಸ್ಥಿತ್ವ

ನನಗೆ ಬೇಡವೇ ಬೇಡ

– ನನ್ನ ಅಸ್ಪೃಶ್ಯನ ಮಾಡಿ

ಈ ಕವನದಲ್ಲಿ ದಲಿತತ್ವದ ಬಗೆಗಿನ ನೋವು ವ್ಯಕ್ತಗೊಂಡಿದ್ದು ಸ್ವಾಭಿಮಾನ, ಆತ್ಮ ಗೌರವ, ಪ್ರತಿಷ್ಠೆ ಇವುಗಳನ್ನು ಕೀಳಾಗಿ ಕಾಣುವ ಈ ಧರ್ಮ ನನಗೆ ಬೇಡವಾಗಿದೆ ಎಂದು ಕವಿ ತನ್ನ ಮನದಾಳದ ಆಕ್ರೋಶದಿಂದ ವ್ಯಕ್ತಪಡಿಸಿರುವುದು ಗೋಚರವಾಗುತ್ತದೆ.

**ಅಡಿ ಟಿಪ್ಪಣಿಗಳು**

**೧. ಕೊಂಡಿಗಳು ಮತ್ತು ಮುಳ್ಳುಬೇಲಿಗಳು ಬಿ. ಚಿನ್ನಸ್ವಾಮಿ ಪುಟ-೩೬**

**೨. ಗೋಧೂಳಿ: ಬಿ.ಚಿನ್ನಸ್ವಾಮಿ ಪುಟ-೨೭**

**೩. ಕೊಂಡಿಗಳು ಮತ್ತು ಮುಳ್ಳುಬೇಲಿಗಳು ಬಿ.ಚಿನ್ನಸ್ವಾಮಿ ಪುಟ-೫೨**

**೪. ಅದೇ ಪುಸ್ತಕ ಪುಟ-೪೩**

**೫. ಗೋಧೂಳಿ ಬಿ.ಚಿನ್ನಸ್ವಾಮಿ ಪುಟ-೧೧**

**೬. ಬಯಲ ಬೆಳಕು ಸಂ.ಅಪ್ಪಗೆರೆ ಸೋಮಶೇಖರ ಪುಟ-೧೬**

ಚಿನ್ನಸ್ವಾಮಿಯವರ ಕಾವ್ಯಗಳ ಅಭಿವ್ಯಕ್ತಿ ಕ್ರಮ ಅಥವಾ ನಿರೂಪಣಾ ಕ್ರಮ ವಿಶಿಷ್ಟ ಧಾಟಿಯಿಂದ ಕೂಡಿದೆ. ಬಹುತೇಕ ಕವಿತೆಗಳನ್ನು ಶಿಷ್ಟ ನೆಲೆಯಲ್ಲಿ ರಚಿಸಿದರೂ ಅದರಲ್ಲಿ ಹಲವು ರೂಪಕ, ಪ್ರತಿಮೆ ಸಂಕೇತಗಳು ಬಳಸಿರುವುದು ನಿಜಕ್ಕೂ ವೈಶಿಷ್ಟ್ಯವೇ ಸರಿ ಎನ್ನಿಸುತ್ತದೆ. ಭಾಷೆಯ ನೆಲೆಯಿಂದ ಗಮನಿಸಿದ್ದಾಗ ಇವರ ಹಲವು ಕವಿತೆಗಳು ಜಾನಪದಿಯ ಅಥವಾ ಗ್ರಾಮೀಣ ಭಾಷೆಯಿಂದ ರಚಿಸುವುದನ್ನು ಗಮನಿಸಿದಾಗ ನಮಗೆ ಅದರಲ್ಲಿನ ಗ್ರಾಮೀಣ ಪರಿಸರದ ಬಗ್ಗೆ ಇರುವ ಪ್ರೀತಿ ಗೊತ್ತಾಗುತ್ತದೆ. ಈ ನಿಟ್ಟಿನಲ್ಲಿ ಇದರ ಕಾವ್ಯಗಳಲ್ಲಿ ಬಳಕೆಗೊಂಡಿರುವ ನಿರೂಪಣಾ ಕ್ರಮವನ್ನು ಕವಿತೆಯ ಹಿನ್ನಲೆಯಿಂದ ಚರ್ಚಿಸಬಹುದು.

**೧. ಪ್ರತಿಮೆ ರೂಪಕ ಮತ್ತು ಸಂಕೇತಗಳು:**

ಚಿನ್ನಸ್ವಾಮಿಯವರ ಕಾವ್ಯಗಳ ಅಭಿವ್ಯಕ್ತಿ ಕ್ರಮವು ಪ್ರತಿಮೆ ರೂಪಕ ಮತ್ತು ಸಂಕೇತಗಳ ಮೂಲಕ ವ್ಯಕ್ತಿಗೊಂಡಿರುವುದು ಕವಿತೆಯನ್ನು ಓದಿದಾಗ ಗೋಚರವಾಗುತ್ತದೆ. ಇವರ 'ನಾನೊಂದು ಮರವಾಗಿದ್ದರೆ" ಎನ್ನುವ ಕವಿತೆಯಲ್ಲಿ 'ಮರ' ದೊಡ್ಡ ಪ್ರತಿಮೆಯಾಗಿ ನಿಂತರೂ ಸಹ ಬಿಸಿಲು, ನೆರಳು, ತಂಬೆಲರು, ಮಳೆ ಇವೆಲ್ಲಾ ಸದಾ ದುಡಿಯುತ್ತಾ ಬಂದ (ಶ್ರಮದ) ಪ್ರತಿಮೆಗಳಾಗಿ ನಮ್ಮ ಮುಂದೆ ನಿಲ್ಲುತ್ತದೆ. "ಹಕ್ಕಿಗೂಡು ಕಟ್ಟುವ ಮುನ್ನ" ಎಂಬುವುದು ರೂಪಕವಾಗಿ ನಿಲ್ಲುತ್ತದೆ. ಮರವನ್ನು ಪ್ರತಿಮೆಯಾಗಿಟ್ಟುಕೊಂಡ ಕವಿ ಆ ಮೂಲಕ ತನ್ನ ಸಮುದಾಯದ ನೋವನ್ನು ವೈಯಕ್ತಿಕ ನೆಲೆಯಿಂದ ರಚಿಸುತ್ತಾನೆ. ದಲಿತನಾಗಿ ಹುಟ್ಟುವುದಕ್ಕಿಂತ ನಾನೊಂದು ಮರವಾಗಿದ್ದರೆ ಎಂದೂ ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುತ್ತಾರೆ ಕವಿ. ಇಲ್ಲಿ ಮರ ಎಂಬುವುದು ದಲಿತ ವ್ಯಕ್ತಿಗಿಂದ ಶ್ರೇಷ್ಠ ಎನ್ನುವ ನಿಟ್ಟಿನಲ್ಲಿ ಬಳಸಿಕೊಳ್ಳಲಾಗಿದೆ. ಜಾತಿ–ಜಾತಿಗಳ ನಡುವೆ ವೈಷಮ್ಯ ಸದಾ ಇರುವಾಗ ನಾನು ಮರವಾಗಿದ್ದರೆ ನಾನು ಯಾವುದೇ ತೊಂದರೆಯನ್ನು ಎದುರಿಸದೆ ಸುಮ್ಮನೆ ಇರಬಹುದಾಗಿತ್ತೆಂಬ ಕವಿಯ ಮನದಾಳದ ಮಾತು ಈ ಕವಿತೆಯಲ್ಲಿ ಬಳಕೆಯಾಗಿದೆ.

ಹಾಗೆ ಇವರ "ಜೀತದಾಳಿನ ಗಾದೆ" ಎನ್ನುವ ಕವಿತೆ ಆನೆಯ ಪ್ರತಿಮೆಯಲ್ಲಿ ಸಾರ್ಥಕವಾಗಿ ಅಭಿವ್ಯಕ್ತಿ ಪಡೆದಿದೆ. 'ಆನೆ' ಎಂಬುದನ್ನು ಹಾಳು ಅಥವಾ ದಲಿತ ಎಂಬ ಸಂಕೇತವಾಗಿ ಬಳಸಿಕೊಂಡು ಜೀತದ ಬಗೆಗಿನ ಪ್ರತಿಭಟನೆ ದಲಿತರಲ್ಲಿನ ಗಟ್ಟಿತನ ಸೂಚಿಸುವ ಸಲುವಾಗಿ ಕವಿ ಬಳಸಿಕೊಂಡಿದ್ದಾರೆ.

"ಗೆದ್ದಲು ಹುಳುಗಳು" ಎಂಬ ಕವಿತೆಯಲ್ಲಿ "ಸನಾತನ ಧರ್ಮ ಒಂದು ಮಹಾವೃಕ್ಷ" ಎನ್ನುವ ಸಾಲಿನಲ್ಲಿ ಮಹಾವೃಕ್ಷ ಅಥವಾ ಮರ ಎಂಬುವುದು ದೊಡ್ಡ ಪ್ರತಿಮೆಯಾಗಿ ನಿಲ್ಲುತ್ತದೆ. ಹಿಂದೂ ಧರ್ಮದ ಸಂಸ್ಕೃತಿಯನ್ನು ಕಟ್ಟಿಕೊಡುವುದರ ಜೊತೆಗೆ ಶ್ರೇಣಿಕೃತ ವ್ಯವಸ್ಥೆಯ ಬಗ್ಗೆ ಹೇಳಲಾಗಿದೆ "ಗೆದ್ದಲು ಹುಳುಗಳು" ಎಂಬುವುದನ್ನು ಅಸ್ಪೃಶ್ಯರ ಸಂಕೇತವಾಗಿ ಬಳಸಿಕೊಳ್ಳಲಾಗಿದೆ. ಮರದ ಪ್ರತಿಮೆಯ ಮೂಲಕ ಕವಿತೆಯ ಕೊನೆಯ ವಿಭಾಗದಲ್ಲಿ ಶಿಥಿಲತೆಯನ್ನು

ಕಾಣಬಹುದಾದರೂ ಅಸ್ಪೃಶ್ಯರನ್ನು ಗೆದ್ದಲು ಹುಳುಗಳನ್ನಾಗಿ ಕಲ್ಪಿಸಿಕೊಂಡಿದು ಪ್ರತಿಭೆಯ ಲಕ್ಷಣವಾಗಿದೆ. ಇಲ್ಲಿ ಕವಿ ಬಳಸುವ ಪ್ರತಿಮೆ ಸನಾತನ ಧರ್ಮವಷ್ಟೇ ಹಳೆಯದು.

'ಚಪ್ಪಲಿ ಮತ್ತು ನಾನು' ಎಂಬ ಕವಿತೆ ಪಾದರಕ್ಷೆಯ ಪ್ರತಿಮೆಯಿಂದ ಪ್ರಾರಂಭವಾಗಿ ದೇವಾಲಯದ ದೇವರ ವಿಗ್ರಹದವರೆಗೆ ವ್ಯಾಪಿಸುತ್ತ ಗರ್ಭಗುಡಿ ಮತ್ತು ಗರುಡಗಂಭದ ನಡುವೆ ಜೀವ ತಂತುವೊಂದನ್ನು ನಿರ್ಮಿಸುತ್ತದೆ. ಸಮಾಜದಲ್ಲಿ ಚಪ್ಪಲಿ ಎಂಬುದಕ್ಕೆ ಅತ್ಯಂತ ಕೀಳಾದ ಸ್ಥಾನವಿರುವುದರಿಂದ ದಲಿತರು ಈ ಚಪ್ಪಲಿಯ ಸ್ಥಾನದಲ್ಲಿರುವುದನ್ನು ಕಂಡು ಕವಿ ಮಮ್ಮಲ ಮರುಗುತ್ತಾರೆ.

'ನಾನೊಂದು ಗಿಡ ಚಪ್ಪಲಿಯೆಂಬುದು ನನ್ನ ಬುಡ' ಎನ್ನುವ ಸಾಲುಗಳು ಸಾಂಕೇತಿಕವಾಗಿ ಹೇಳಬಯಸುವ ಬದುಕಿನ ವ್ಯಾಖ್ಯಾನ ಅದರ ಹೊಸತನದಿಂದ ಹಾಗೂ ಕಲಾತ್ಮಕತೆಯಿಂದ ನಮ್ಮ ಮೆಚ್ಚುಗೆಗೆ ಕಾರಣವಾಗುತ್ತದೆ.

ಇಡೀ ಕವಿತೆಗೆ 'ಚಪ್ಪಲಿ' ಪ್ರತಿಮೆಯಾಗುವುದರ ಮೂಲಕ ದಲಿತತ್ವದ ನೋವು ಕಟ್ಟಿಕೊಡಲು ಇದು ಸಮರ್ಥ ಎನಿಸುತ್ತದೆ. ಆದ್ದರಿಂದ ಕವಿ ಒಂದು ವಿಷಯವನ್ನು ನೇರವಾಗಿ ತಿಳಿಸುವ ಬದಲು ಉಪಮೆಯ ಮೂಲಕ ತಿಳಿಸಿ ಮಾತಿಗೆ ವಿಶೇಷವಾದ ವ್ಯಂಜಕ ಸಾಮಾಗ್ರಿಯನ್ನು ತುಂಬುತ್ತಾರೆ. ಮನುಷ್ಯಲೋಕದ ರೀತಿ ರಿವಾಜನ್ನು ಅರ್ಥಮಾಡಿಕೊಳ್ಳಲು ಕವಿ ನಿಸರ್ಗದಿಂದಲೇ ರೂಪಕಗಳನ್ನು ಎತ್ತಿಕೊಳ್ಳುತ್ತಾರೆ. ಜನರ ಜಂಜಾಟವನ್ನು ಬಿಡಿಸುವ ಸಿದ್ದೌಷದ ನಿಸರ್ಗದಲ್ಲಿದೆ ಅದೇ ರೀತಿಯಾಗಿ ಇವರ ಕಾವ್ಯದುದ್ದಕ್ಕೂ ಅಸ್ಪೃಶ್ಯತೆಯ ಅವಮಾನ ಹಾಗೂ ಸ್ವಾಭಿಮಾನಿಗಳು ಬಹುದೊಡ್ಡ ರೂಪಕಗಳಾಗುತ್ತವೆ. ಇನರ 'ಅಜ್ಜಿ ಮತ್ತು ಮೊಮ್ಮಗಳು' ಕವಿತೆಯಲ್ಲಿ ಬಹಳ ಒಳ್ಳೆಯ ರೂಪಕವನ್ನು ಬಳಸಿದ್ದಾರೆ. ಇಡೀ ಪದ್ಯವೇ ಒಂದು ರೂಪಕವಾಗಿ ಮೈದಾಳಿದೆ. ಈ ಕವಿತೆಯಲ್ಲಿರುವುದು ಚಿನ್ನಸ್ವಾಮಿಯವರ ನೆನಪುಗಳೇ ಆಗಿವೆ. ಇವರ ಆ ಹಿಂದಿನ ನೆನಪುಗಳು ಯಾವುದೆಂದರೆ ಅವರ ಅಜ್ಜಿ ಹಾಗೂ ಅವರ ಜನರೊಡನೆ ಬೆಳೆದ ನೆನಪುಗಳು.

ಅಂಥ ಒಂದೂರಲ್ಲಿ ಇಂಥ ಒಂದಜ್ಜಿ।
ಹಟ್ಟಿಯೊಳಗೊಂದು ಹಜಾರ ಹಜಾರದೊಳಗೊಂದು ಮೂಲೆ।
ಮೂಲೆಗೆ ಒರಗೇ ಇತ್ತು ಮರೆತ ಮೂಲೆಯಲ್ಲೊಂದು ಸವೆದ ಕಸ ಬರಕೆ।

– ಅಜ್ಜಿ ಮತ್ತು ಮೊಮ್ಮಗಳು

ಈ ಕವಿತೆಯಲ್ಲಿ ಕವಿ ಮಾತನಾಡುತ್ತಿಲ್ಲ ಬದಲಾಗಿ ಬರೀ ಚಿತ್ರಗಳನ್ನು ನಮ್ಮೆದುಗಿಡುತ್ತಾ ಹೋಗುತ್ತಾರೆ ಮುಂದೆ ಹೀಗೆ ಕವಿತೆ ಮುಂದುವರಿಯುತ್ತಾ ಹೋಗುತ್ತದೆ.

ಅಜ್ಜಿಯದು ಯಾವಾಗಲು

ಸಮಾಧಿ ಸ್ಥಿತಿ

ಸಮಾಧಿ ಕೂಳಿಗೆ ನೆಂಟಿಸ್ಪ

ಕಾಗೆಗಳು ಎಷ್ಟು ಬರುವವೋ ಏನೋ ಎಂಬ ಚಿಂತೆ.

ತನ್ನ ಗತ ಕಾಲದ ನೆನಪುಗಳೊಂದಿಗೆ

ಮೊಮ್ಮಗಳ ಚಿನ್ನಾಟ ಬೆಸೆಯುತ್ತಾ

ಜೀವನದಿಯ ನಿರಂತತೆಯನ್ನು ಹುಡುಕುತ್ತಾ

ಬಿಡುವಿನ ವೇಳೆ ಮೊಮ್ಮಗಳ ಕರೆದು

'ತಲೆ ನೋಡವ್ವ' ಕಡಿತ ಎನ್ನುತ್ತದೆ ಅಜ್ಜಿ

– ಅಜ್ಜಿ ಮತ್ತು ಮೊಮ್ಮಗಳು



ಒಂದು ಕಡೆ ಅಜ್ಜಿ, ಒಂದು ಕಡೆ ಮೊಮ್ಮಗಳು ಅಂದರೆ ಸೂರ್ಯ ಮುಳುಗುತ್ತಿದ್ದಾನೆ. ಇನ್ನೊಂದು ಕಡೆ ಸೂರ್ಯ ಕುಡಿಯೊಡೆಯುತ್ತಿದ್ದಾನೆ. ಆ ಕುಡಿ ವಂಶದ ಕುಡಿ. ಅಜ್ಜಿ ಮತ್ತು ಮೊಮ್ಮಗಳ ಈ ಕವಿತೆಗೆ ಯಾವ ವ್ಯಾಖ್ಯಾನವು ಬೇಡ ಎನಿಸುತ್ತದೆ. ಈ ಕವಿತೆಯಲ್ಲಿ ನಮಗೆ ಎಷ್ಟು ಬೇಕಾದರೂ ಅರ್ಥಗಳನ್ನು ಈ ಪದ್ಯ ಕೊಡುತ್ತದೆ. ಒಂದು ಕಡೆ ಮೂಡುವ ಮತ್ತೊಂದು ಕಡೆ ಮುಳುಗುವ ಸಂಕೇತವೇ ಅಜ್ಜಿ ಮತ್ತು ಮೊಮ್ಮಗಳು.

'ಗೆದ್ದಲು ಹುಳುಗಳು' ಎಂಬ ಕವಿತೆ ಸನಾತನ ಧರ್ಮಕ್ಕೂ, ದಲಿತರಿಗೂ ಇರುವ ಸಂಬಂಧವನ್ನು ವಿವರಣಾತ್ಮಕವಾಗಿ ಮಂಡಿಸುತ್ತಾ ಕಡೆಯ ಪಂಕ್ತಿಯಲ್ಲಿ ಅತ್ಯಂತ ಸಾಂಕೇತಿಕವಾಗಿ ಧ್ವನ್ಯಾರ್ಥವನ್ನು ಮಂಡಿಸುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ.

ವೃಕ್ಷಕ್ಕೆ ಸಂಬಂಧಪಡದ ಮತ್ತು ಅಲ್ಲೇ ಇರಬೇಕಾದ ಗೆದ್ದಲು ಹುಳುಗಳು ಅಸ್ಪೃಶ್ಯರು  ಸನಾತನ ಧರ್ಮ ನಿರ್ಜೀವವಾಗಿ ಒಣಗಬೇಕು. ಅದನ್ನು ಗೆದ್ದಲು ಹುಳುಗಳು ತಿಂದು ಜೀವ ಹೊರೆದುಕೊಳ್ಳಬೇಕು. ಅವರೆಡಕ್ಕೆ ಸಂಬಂಧವಿಲ್ಲ ಎನ್ನುವ ಹಾಗಿಲ್ಲ ಯಾಕೆಂದರೆ ಆ ಅಸ್ತಿತ್ವ ಅನ್ಯೋನ್ಯಾಶ್ರಯಿವಾಗಿದೆ. ಆದರೆ ಅವರೆಡರ ಸಂಬಂಧ ಕಾಂಡ ಹಾಗೂ ಟೊಂಗೆಗಳಂತೆ ಜೈವಿಕವಾದುದಲ್ಲ.

## ಭಾಷೆ ಮತ್ತು ಶೈಲಿ:

ಕವಿತೆ ಒಂದು ಸಾಮಾಜಿಕ ಸಂಕಟ ತನಗೂ ಸಮಾಜಕ್ಕೂ ಉಂಟಾದ ಸಂಕಟಗಳನ್ನು ಹೇಳಲು ಕವಿಗೆ ಅನೇಕ ಮಾಧ್ಯಮಗಳಿವೆಯಷ್ಟೆ ಅದರಲ್ಲಿ ಭಾಷೆಯೂ ಒಂದು ಮಾಧ್ಯಮ. ಈ ಭಾಷೆ ಕಾವ್ಯ ಭಾಷೆಯ ಅಂತಃಶಕ್ತಿ ಪಡೆದಾಗ ಮಾತ್ರ ಕವಿತೆಯಾಗುತ್ತದೆ.

ಕಾವ್ಯವು ಜನರ ಆಡುಮಾತು ಅದರಲ್ಲೂ ಆಡು ಭಾಷೆಯಲ್ಲಿರುವ ನುಡಿಗಟ್ಟುಗಳ ಬಳಕೆಯಿಂದ ರಚನೆಯಾದರೆ ಅದು ಪರಿಣಾಮಕಾರಿಯಾದ ಉತ್ತಮ ಮಟ್ಟದ ಕಾವ್ಯವಾಗುತ್ತದೆ. ಪ್ರತಿಮೆಗಳು, ಸಂಕೇತಗಳು ರೂಪಕ ಇವೆಲ್ಲವೂ ಆಡುಭಾಷೆಯಲ್ಲಿವೆ. ಇಂತಹ ಆಡುಭಾಷೆಯಲ್ಲಿನ ಕಾವ್ಯತ್ಮಕವಾದ ನುಡಿಗಟ್ಟುಗಳನ್ನು ಕವಿಗಳು ಕಾವ್ಯದಲ್ಲಿ ಬಳಸಿಕೊಂಡಾಗ ನಿಜಕ್ಕೂ ಉನ್ನತ ಮಟ್ಟದ ಕಲೆಗಾರಿಕೆಯನ್ನು ಸಾಧಿಸಬಹುದು. ಕವಿಗೆ ಈ ಬಗ್ಗೆ ಅರಿವಿದೆ ಇವರ ಕವಿತೆಗಳಲ್ಲಿ ಅಲ್ಲಲ್ಲಿ ಈ ರೀತಿಯ ಭಾಷಾ ಬಳಕೆಯನ್ನು ಮಾಡುವ ಪ್ರಯತ್ನವನ್ನು ಮಾಡಿದ್ದಾರೆ. ಇವರ ಬಹುತೇಕ ಕವಿತೆಗಳು ಶಿಷ್ಟಭಾಷೆಯಿಂದಲೇ ರಚನೆಗೊಂಡಿದ್ದು ಸಾಮಾನ್ಯ ಓದುಗರಿಗೂ ಅರ್ಥವಾಗುವ ಹಾಗೆ ರಚನೆಗೊಂಡಿವೆ.

‘ಹಣೆಬರಹ’ ‘ನೀವ್ ಹುಟ್ಟಿದ್ದಾಗ ಯಾಕೆ’ ‘ಯಾಕಿಂಗ್ಮಾಡಿದ್ರೋ’ ‘ಊರ ತೆಂಕಣ ತಜ್ಞರು’ ಈ ಕವನಗಳು ಶುದ್ದ ಗ್ರಾಮ್ಯಭಾಷೆಯಿಂದಲೇ ರಚನೆಗೊಂಡಿದ್ದು ಉಳಿದ ಬಹುತೇಕ ಕವಿಗಳು ಶಿಷ್ಟಪರಿಧಿಯಲ್ಲೆ ರಚನೆಗೊಂಡಿದೆ. ಕವಿತೆಯ ಯಶಸ್ಸಿನಲ್ಲಿ ಭಾಷೆಯು ಕೂಡ ಪ್ರಮುಖ ಪಾತ್ರ ವಹಿಸುತ್ತದೆ. ಅದು ಶಿಷ್ಟ ಅಥವಾ ಗ್ರಾಮ್ಯ ಭಾಷೆಯಾದರೂ ಆಗಬಹುದು. ಈ ನಿಟ್ಟಿನಲ್ಲಿ ಕವಿಯು ತಾನು ಕೂಡ ಹಲವು ಘಟನೆಗಳನ್ನು ತನ್ನ ಪ್ರತಿಭಾ ಸಾಮರ್ಥ್ಯದಿಂದ ಕವಿತೆ ಕಟ್ಟಿರುವುದು ಒಂದು ವಿಶೇಷವಾಗಿದೆ.

‘ಯಾಕಿಂಗ್ಮಾಡಿದ್ರೊ’ ಎನ್ನುವ ಕವಿತೆಯ ಸಾಲುಗಳು ತೀರಾ ಗ್ರಾಮೀಣ ಭಾಷೆಯಲ್ಲಿ ಬಳಕೆಗೊಂಡಿರುವುದನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

ಏನ್ಮಡಿದ್ರೋ ನೀವೇನ್ಮಾಡಿದ್ರೋ

ನಮ್ಮಪ್ಪ ಅವ್ವ ಹೆತ್ತವ್ರೆಲ್ಲ ಏನ್ಮಾಡಿದ್ರೋ

ಯಾರೇನ್ಮಾಡಿದ್ರೋ ನಮಗಿಂಗ್ಯಾಕ್ ಮಾಡಿದ್ರೋ

ಹಾಗೆಯೇ ಹಣೆಬರಹ ಕವಿತೆಯಲ್ಲಿ ಬರುವ ಸಾಲುಗಳು ಕೂಡ ಗ್ರಾಮೀಣ ಸೊಗಡಿನೊಂದಿಗೆ ಬಳಕೆಗೊಂಡಿರುವುದನ್ನು ಗಮನಿಸಬಹುದು.

ಮಗ: ಅಪ್ಪ, ಗ್ನೌಟ್ಟಿ ಹಸು ಹಾಲು ಕೊಡುತ್ತಾ

ಅಪ್ಪ: ಹೌದಪ್ಪಾ

ಮಗ: ಬೆಣ್ಣೇನೂ ತೆಗೀತಾರೆ ಹಾಗಿದ್ರೆ

ಅಪ್ಪ: ಅನುಮಾನ ಯಾಕಪ್ಪ

ಇಂತಹ ಗ್ರಾಮ್ಯ ಭಾಷೆಯನ್ನುಳ್ಳ ಹಲವಾರು ಕವಿತೆಗಳು ಚೆನ್ನಸ್ವಾಮಿಯವರ ಕವನ ಸಂಕಲನಗಳಲ್ಲಿ ಕಂಡುಬರುತ್ತವೆ.

# ಉಪಸಂಹಾರ

ಸಾವಿರಾರು ವರ್ಷಗಳ ಸಾಹಿತ್ಯ ವಿವಿಧ ಘಟ್ಟಗಳಲ್ಲಿ ಬೆಳೆದು ಬಂದಿದೆ. ಜೈನ ಸಾಹಿತ್ಯ, ಶೈವ ಸಾಹಿತ್ಯ ಮತ್ತು ವೈದಿಕ ಸಾಹಿತ್ಯ ಎಂಬುದಾಗಿ ದಲಿತ ವರ್ಗಕ್ಕೆ ದಾಸ್ಯವನ್ನು ಭೋದಿಸಿ, ಅವರಿಗೆ ಜನ್ಮಾಂತರದ ಪಾಪಗಳೆಂದು ಮತ್ತು ಅವರಿಗೆ ಮೋಕ್ಷದ ಮಾರ್ಗಗಳನ್ನು ತೋರಿಸಲು ಹೊರಟರು. ಅವರ ಈ ವಿಮೋಚನೆಯನ್ನು ಆ ಸಾಹಿತ್ಯ ಮಾಡಲಿಲ್ಲ. ನಡುಗನ್ನಡ ಸಾಹಿತ್ಯ ಕೆಳವರ್ಗದ ಧ್ವನಿಗಳನ್ನು ಬಹಿರಂಗವಾಗಿ ವ್ಯಕ್ತಪಡಿಸಿತು. ಕನ್ನಡ ದಲಿತ ಸಾಹಿತ್ಯವು ೧೨ ನೇ ಶತಮಾನದ ವಚನ ಸಾಹಿತ್ಯದಿಂದ ಗುರುತಿಸಲಾಗಿದೆ. ವಚನ ಸಾಹಿತ್ಯದಲ್ಲಿ ಮಾದಾರ ಚೆನ್ನಯ್ಯ, ಬಸವಣ್ಣ, ಡೋಹರ ಕಕ್ಕಯ್ಯ ಮುಂತಾದವರು ದಲಿತರೇ ಆಗಿದ್ದು ದಲಿತರ ನೋವಿನ ಬಗೆಗಿನ ಪ್ರತಿಭಟನೆ ಮೊದಲು ವಚನ ಸಾಹಿತ್ಯ ಕಾಣಿಸಿಕೊಂಡಿತು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ, ನವ್ಯಪಂಥಗಳು ಮೊದಲು ಕಾಣಿಸಿಕೊಂಡವು. ೧೯೭೦ರ ದಶಕದಲ್ಲಿ ದಲಿತ ಬಂಡಾಯ ಸಾಹಿತ್ಯ ಪ್ರಮುಖವಾಗಿ ಕಾಣಿಸಿಕೊಂಡಿತು. ಈ ಸಾಹಿತ್ಯವು ಇತ್ತೀಚಿನದಾದರೂ ಇದರಲ್ಲಿ ಶೋಷಣೆಯಿಂದ ತುಳಿಯಲ್ಪಟ್ಟ ಕೌರ್ಯಕ್ಕೆ ತುತ್ತಾದ ಸಮುದಾಯದ ಜನತೆ ಅಲ್ಲಿದ್ದುಕೊಂಡೆ ದಲಿತ ಸಾಹಿತ್ಯವನ್ನು ಬರವಣಿಗೆಯ ರೂಪದಲ್ಲಿ ಪ್ರಚುರಪಡಿಸಿದರು. ದಲಿತ ಸಾಹಿತ್ಯವು ತನಗೆ ಉಂಟಾಗುವ ಎಲ್ಲಾ ರೀತಿಯ ಶೋಷಣೆಗಳಿಗೆ ಪ್ರತಿಭಟನೆಯ ಮೂಲಕ ಉತ್ತರವನ್ನು ನೀಡುತ್ತಿದ್ದಾರೆ.

ದಲಿತ ಸಾಹಿತ್ಯದಲ್ಲಿ ಕವಿತೆಗಳು ಗೇಯತೆ ಅಂಶದಿಂದ ಕೂಡಿದ್ದು ಅದು ಜಾನಪದದ ಸೊಗಡನ್ನು ಪ್ರಾದೇಶಿಕ ಭಾಷೆಯ ಪ್ರಕಾರಗಳನ್ನು ಒಳಗೊಂಡಿದೆ. ಅವುಗಳನ್ನು ತಾನು ಕಂಡುಂಡ ವಾಸ್ತವಿಕ ಪ್ರಪಂಚದ ಅನುಭವಗಳನ್ನು ಕಾವ್ಯದ ಮೂಲಕ ಹೊರಹಾಕಿ ಅದನ್ನು ಇತರರಿಗೆ ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಡಾ॥ ಅರವಿಂದ ಮಾಲಗತ್ತಿ ಹೇಳುವಂತೆ 'ಕನ್ನಡ ಕಾವ್ಯದಲ್ಲಿ ದಲಿತ ಧ್ವನಿಗಳನ್ನು ಹೆಕ್ಕಿ ತೆಗೆಯಬೇಕೆಂದರೆ ಧೀರ್ಘ ಕಾಲಾವಧಿಯ ಬೃಹತ್ ಸಂಪುಟಗಳ ಯೋಜನೆಯೇ ರೂಪುಗೊಳ್ಳಬೇಕು. ಐದು ಸಾವಿರ ಪುಟಗಳನ್ನು ಮೀರಿ ಬರೆಯುವಷ್ಟು ವಿಷಯವಿರುವಾಗ, ಐವತ್ತು ಪುಟಗಳಿಗಾಗಿ ಯಾವ ವಿಷಯ ಎಷ್ಟು ಆಯ್ದುಕೊಳ್ಳಬೇಕು ಎನ್ನುವುದೇ ಸಮಸ್ಯೆ ಇದು 'ಕಡಲು ನೀರನ್ನು ಗಿಂಡಿಯಲ್ಲಿ ಹಿಡಿಯುವ ಸಾಹಸ' ಎಂದು ಹೇಳಿದ್ದಾರೆ.

ಕವಿ ಜನರ ನೋವು–ನಲಿವು ಏನು ಎಂಬುದನ್ನು ತಾವೇ ಸ್ವತಃ ಅನುಭವಿಸಿದ್ದಾರೆ. ತಾನು ಅನುಭವಿಸಿದ ಆ ನೋವಿಗೆ ಒಂದು ಕಾವ್ಯ ರೂಪವನ್ನು ಕೊಟ್ಟಿರುವುದು ಇವರ ಬಹುತೇಕ ಕವಿತೆಗಳಲ್ಲಿ ಕಾಣಬಹುದು. ಅದರಂತೆ ಕೆಳವರ್ಗದ ನೋವನ್ನು ವಿಭಿನ್ನ ಧಾಟಿಯಲ್ಲಿ ಕಂಡರಿಸಲು ಕವಿ ತಮ್ಮ ಕಾವ್ಯದಲ್ಲಿ ತೊಡಗಿರುವುದಕ್ಕೆ ಸೂಕ್ಷ್ಮವಾದ ಕಾವ್ಯರೂಪಗಳ ಅನ್ವೇಷಣೆಯಲ್ಲಿರುವುದಕ್ಕೆ ಹಲವು ನಿದರ್ಶನಗಳಿವೆ. ಅವರ ಸೃಷ್ಟಿಯಲ್ಲಿ ನಿರೀಕ್ಷಿತ ಲಯಗಳನ್ನು ಪಕ್ಕಕ್ಕಿಟ್ಟು ಮಾತಿನ ಲಯಕ್ಕೆ ಒತ್ತು ಕೊಡುತ್ತಾ ಸರಳವಾದ ಚಿತ್ರಗಳ ಕೂಲಕ ಸಂಕೀರ್ಣವಾದ ವಿನ್ಯಾಸವನ್ನು ಬಿಡಿಸುವುದು ಅವರ ಕಾವ್ಯದ ಮಾರ್ಗವಾಗಿದೆ.

'ಖಡ್ಗವಾಗಲಿ ಕಾವ್ಯ' ಎಂಬ ಕಹಳೆಯ ಮೊಳಗನ್ನು ಕೇಳುತ್ತಲೇ ತಮ್ಮ ಕಾವ್ಯ ಹೀಗಾಗುವುದಕ್ಕೆ ಸಾಧ್ಯವಿಲ್ಲವೆಂಬುದನ್ನು ಆರಂಭದಲ್ಲೆ ಮನಗಂಡ ಚಿನ್ನಸ್ವಾಮಿಯವರು 'ಕಾವ್ಯವನ್ನು ಕುಡುಗೋಲು ಮಾಡಿಕೊಂಡು ನೋವಿನ ಕುಯಿಲು ಮಾಡಿದ್ದೇನೆ. ಎಂದಿರುವುದರ ಜೊತೆಗೆ ಸಮಕಾಲೀನ ವಸ್ತು ವಿಷಯಗಳನ್ನು ಕುರಿತು ಮೆಲುದನಿಯಲ್ಲಿ ಮಾತನಾಡುವ ಮಾರ್ಗವೇ ಸನಿಹವೆಂದು ಬಗೆದು ಮುಂದುವರೆದಿದ್ದಾರೆ. ಹಾಗೆಯೇ ನೋವು ಅವರ ಕವಿತೆಯ ಸ್ಥಾಯಿಭಾವ ಅದನ್ನು ಪ್ರಕಟಿಸಲು ಅಳವಡಿಸಿಕೊಂಡ ಸುಸಂಸ್ಕೃತ ಅಭಿವ್ಯಕ್ತಿ ಕ್ರಮ ಅವರ ಕವಿತೆಯ ವೈಶಿಷ್ಟ್ಯವೆಂದರೆ ಹೇಳಬಹುದು.

ಮನುಷ್ಯ ಮೂಲಭೂತವಾಗಿ ಸಂಕೀರ್ಣ ಚಿನ್ನಸ್ವಾಮಿಯವರ ಒಟ್ಟು ಕವನಸಂಕಲನಗಳನ್ನು ಗಮನಿಸಿದರೆ ಅಲ್ಲಿ ಬಂಡಾಯದ ಸರಳತೆಯ ಅಭಿವ್ಯಕ್ತಿ ಇದೆ.

"ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು

ಬಯಲು ಬಯಲಾಗಿ ಬಯಲಾಯಿತ್ತಯ್ಯಾ

ಬಯಲ ಜೀವನ ಬಯಲ ಭಾವನೆ

ಬಯಲು ಬಯಲಾಗಿ ಬಯಲಾಯಿತ್ತಯ್ಯಾ

ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು

ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ"

– ಅಲ್ಲಮಪ್ರಭು

ಬದುಕು ಬಯಲಾಗದ ಹೊರತು ಬೆಳಕಾಗದು ಪ್ರಸ್ತುತ ಮುಖವಾಡದ ಜಗತ್ತಿನಲ್ಲಿ ತನ್ನೆಲ್ಲ ನಿಜದ ನೆಲೆಗಳನ್ನು ಕಳೆದುಕೊಂಡು ಅನಾಥ ಸ್ಥಿತಿಯಲ್ಲಿರುವ 'ಮನುಷ್ಯ ಬದುಕು' ಬಯಲಾಗುವ, ಬಯಲು ಬೆಳಕಾಗುವ ಆ ಮುಖೇನ ಬದುಕು ಬೆಳಕಾಗುವ ತುರ್ತಿದೆ ಜೊತೆಗೆ ಬುದ್ಧ ಪ್ರಣೀತ ದಲಿತತ್ವದ ದೂರದರ್ಶಜ್ಞಾನದ ಎಚ್ಚರ ಬೇಕಿದೆ.

ಪ್ರಸ್ತುತ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಂಬೇಡ್ಕರ್ ಪ್ರಣೀತ ಬುದ್ಧ ಪ್ರಜ್ಞೆಯ ಹಿನ್ನೆಲೆಯಲ್ಲಿ ತಮ್ಮ ಸೃಜನಶೀಲತೆಯನ್ನು ಕಟ್ಟಿಕೊಳ್ಳುತ್ತಿರುವ ಅಪರೂಪದ ಕವಿ ಇವರೇ ಆಗಿದ್ದಾರೆ. ಸಾಮಾಜಿಕ ಬದುಕಿನೆಲ್ಲಾ ಸಾಂಸ್ಕೃತಿಕ ಸಮಸ್ಯೆಗಳಿಗೆ ಬೋಧಿತತ್ವದಡಿಯಲ್ಲಿ ಪರಿಹಾರಗಳನ್ನು ಕಂಡುಕೊಳ್ಳಲೆತ್ನಿಸುವುದು ಇವರ ಒಟ್ಟು ಬರಹದ ವಿವೇಕವಾಗಿದೆ. ಇವರ ಕಾವ್ಯದ ಓದಿನಲ್ಲಿ ಇದನ್ನು ಹೆಚ್ಚು ಪ್ರಮಾಣೀಕರಿಸಬಹುದು. ಓದುಗರನ್ನು ಬುದ್ಧತ್ವದ ಕಡೆಗೆ ವಿವೇಚಿಸುವಂತೆ ಮಾಡುವ ವಿಶೇಷ ಗುಣ ಇವರ ಸಾಹಿತ್ಯಕ್ಕಿದೆ ಜೊತೆಗೆ ಒಟ್ಟು ಭಾರತೀಯ ಸಾಮಾಜಿಕ ಸಂದರ್ಭವೇ ಬುದ್ಧ ಚಿಂತನೆಯ ಕಡೆಗೆ ಸಂಚಲಿಸುವ ಅಗತ್ಯತೆಯನ್ನು ಒತ್ತಿ ಹೇಳುತ್ತಾರೆ. ೨೧ನೇ ಶತಮಾನದ ಕನ್ನಡ ಸಾಹಿತ್ಯದ ಸಂದರ್ಭ ಕೂಡ ಬುದ್ಧನ ತಾತ್ವಿಕ ನೆಲೆಗಟ್ಟಿನ ಮೇಲೆ ಅರಳಬೇಕಾಗಿರುವ ಅನಿವಾರ್ಯತೆಯನ್ನು ಇವರ ಕಾವ್ಯ ಸ್ಪಷ್ಟವಾಗಿ ದಾಖಲಿಸುತ್ತದೆ.

ಚಿನ್ನಸ್ವಾಮಿಯವರ ಕಾವ್ಯ ಅರ್ಥೈಸುವ ಬುದ್ಧ ಪ್ರಜ್ಞೆಯ ಹಿನ್ನೆಲೆಯು ಬಹುಸ್ತರೀಯವಾದುದ್ದು ಇವರ ಬುದ್ಧ ಪ್ರಜ್ಞೆಯ ಆಳದಲ್ಲಿ ಬಸವಾದಿ, ಶರಣರ, ನೆಲಸಂಸ್ಕೃತಿಯ ನೇತಾರರಾದ ಮಂಟೇಸ್ವಾಮಿ, ಮಹದೇಶ್ವರ, ಗಾಂಧೀಜಿ ಹಾಗೂ ವಿಶ್ವಮಾನವತ್ವವಾದಿ ಕುವೆಂಪು ಅವರುಗಳ ಮಾತೃ ಸಂವೇದನಾಶೀಲ ಹೃದಯವಂತಿಕೆ ಇದೆ.

ಒಟ್ಟಿನಲ್ಲಿ ದಲಿತ ಸಾಹಿತ್ಯ ಬರಡಾಗಿದೆ ಅನ್ನುವ ಕಾಲದಲ್ಲಿ ಚಿನ್ನಸ್ವಾಮಿಯವರ ಕವಿಯಾಗಿ ನಮ್ಮ ಹೃದಯಗಳಲ್ಲಿದ್ದು, ವಿಶಿಷ್ಟವಾದ ಸೂಕ್ಷ್ಮ ಮನಸ್ಸಿನ ಮಾನವೀಯ ಅಭಿವ್ಯಕ್ತಿಯ ಕವಿಯಾಗಿ ಕಂಡುಬರುತ್ತಾರೆ.

# ಪರಾಮರ್ಶನ ಗ್ರಂಥಗಳು

೧. ಕನ್ನಡ ದಲಿತ ಸಾಹಿತ್ಯ

ಸಮಾಲೋಚನ

ಸಂ. ಡಾ.ಅರ್ಜುನ ಗೋಳಸಂಗಿ

ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ.ರಸ್ತೆ,

ಬೆಂಗಳೂರು-೫೬೦೦೦೨

೨. ದಲಿತ ಬಂಡಾಯ ಸಾಹಿತ್ಯ

ಡಾ.ಪುರುಷೋತ್ತಮ ಬಿಳಿಮಲೆ

ಕರ್ನಾಟಕ ಸಾಹಿತ್ಯ ಅಕಾಡೆಮಿ

ಬೆಂಗಳೂರು-೧೯೯೦

೩.ದಲಿತ ಮಾರ್ಗ

ಸಂ. ಡಾ. ಅರವಿಂದ ಮಾಲಗತ್ತಿ

ಕನ್ನಡ ಪುಸ್ತಕ ಪ್ರಾಧಿಕಾರ

ಬೆಂಗಳೂರು.

೪.ದಲಿತ ಸಾಹಿತ್ಯ ನೆಲೆ ಹಿನ್ನಲೆ

ಡಾ. ಅರವಿಂದ ಮಾಲಗತ್ತಿ

ಕನ್ನಡ ಪುಸ್ತಕ ಪ್ರಾಧಿಕಾರ

ಬೆಂಗಳೂರು

೫. ಬಯಲ ಬೆಳಕು

ಅಪ್ಪಗೆರೆ ಸೋಮಶೇಖರ ಸಂಪಾದಕರು

ವಿಚಾರ ಸಂಕೀರಣದ ಪ್ರಬಂಧಗಳು

೬.ಕನ್ನಡ ಸಾಹಿತ್ಯ ಮತ್ತು ಜನಪರ ಚಳುವಳಿಗಳು

ಸಂ.ಡಾ. ರಂಗರಾಜ ವನದುರ್ಗ

ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೭.ಕನ್ನಡ ಕಾವ್ಯದಲ್ಲಿ ದಲಿತ ಧ್ವನಿಗಳು

ಸಂ. ಅರವಿಂದ ಮಾಲಗತ್ತಿ

೮.ದಲಿತ-ಬಂಡಾಯ ಸ್ಥಗಿತತೆ ಒಂದು ಸಂವಾದ

ಸಾಹಿತ್ಯ ಸಂವಾದ-೪೯

೯.ದಲಿತ ಸಾಹಿತ್ಯ ಪ್ರವೇಶಿಕೆ

ಸಂ. ಅರವಿಂದ ಮಾಲಗತ್ತಿ

# ಆಕರ ಗ್ರಂಥಗಳು

೧.ಕೊಂಡಿಗಳು ಮತ್ತು ಮುಳ್ಳು ಬೇಲಿಗಳು

ಬಿ.ಚಿನ್ನಸ್ವಾಮಿ

ಭಾಗ್ಯ ಪ್ರಕಾಶನ

ರಾಜಾಜಿನಗರ

ಬೆಂಗಳೂರು

೨. ಗೋಧೂಳಿ

ಬಿ.ಚಿನ್ನಸ್ವಾಮಿ

ಶುಭದ ಪ್ರಕಾಶನ

ಜರಗನಹಳ್ಳಿ

ಬೆಂಗಳೂರು

೩. ಚಪ್ಪಲಿ ಮತ್ತು ನಾನು

ಮೂಡ್ನಾಕೂಡು ಚಿನ್ನಸ್ವಾಮಿ

೪. ನಾನೊಂದು ಮರವಾಗಿದ್ದರೆ

ಮೂಡ್ನಾಕೂಡು ಚಿನ್ನಸ್ವಾಮಿ

ಪ್ರಥಮ ಮುದ್ರಣ – ೧೯೯೮

ಬೆಂಗಳೂರು.